

## ಸಾಹಿತ್ಯಿಕ–ಸಾಂಸ್ಕೃತಿಕ ದ್ವೈಮಾಸಿಕ ಪತ್ರಿಕೆ

❊❊❊❊❊❊❊❊❊ ❊❊❊❊❊❊❊❊

ಬಿಡಿ ಪ್ರತಿ ರೂ. ೮.೫೦ + ಖಾಸಗಿ ಪ್ರಸಾರಕ್ಕಾಗಿ ಮಾತ್ರ

# ಹೊಸದಿಕ್ಕು ಸಾಹಿತ್ಯಿಕ - ಸಾಂಸ್ಕೃತಿಕ ದ್ವೈಮಾಸಿಕ

ಸಂಪುಟ–೧ ಸಂಚಿಕೆ–೨ (ಜುಲೈ - ಆಗಸ್ಟ ೧೯೯೨)

**ಸಂಪಾದಕ : ತಿಮ್ಮಯ್ಯ ಪುರ್ಲೆ**

**ಸಲಹೆ : ಚಂದ್ರಕಾಂತ ಕರದಳ್ಳಿ, ಎಸ್.ಬಿ. ಹೊಸ್ಮನಿ, ಪ್ರೊ. ಸೂಗಯ್ಯ ಹಿರೇಮಠ**

ನೀವು ಕಳಿಸುವ ಚಂದಾ “ಹೊಸದಿಕ್ಕು” ಬೆಳವಣಿಗೆಯ ಸಂಕೇತ

ವಾರ್ಷಿಕ ಚಂದಾ - ರೂ. ೫೦–೦೦ + ಅಜೀವ ಚಂದಾ - ರೂ. ೫೦೦-೦೦

*ಹೈದರಾಬಾದ ಕರ್ನಾಟಕ ಹಾಗು ಸುತ್ತಲಿನ ಬಿಜಾಪುರ, ಬಳ್ಳಾರಿ ಜಿಲ್ಲೆಗಳ ಲೇಖಕರಿಗೆ ಹೆಚ್ಚಿನ ಪ್ರಾತಿನಿಧ್ಯ ನೀಡುವ ಮೂಲಕ ಕನ್ನಡ ನಾಡಿನಾದ್ಯಂತ ತಲುಪಲು ಇಚ್ಛಿಸುವ 'ಹೊಸದಿಕ್ಕು' ಗೆ ದಯವಿಟ್ಟು ನೀವು ಚಂದಾದಾರರಾಗಿ. ನಿಮ್ಮ ಸ್ನೇಹಿತರನ್ನು ಆಸಕ್ತರನ್ನು ಚಂದಾದಾರರಾಗಿಸಿರಿ. ಲೇಖನ, ಕವನ, ಕಥೆ, ಇತ್ಯಾದಿ ಕಳಿಸುವವರು ಸ್ವೀಕೃತಿ ಬಗ್ಗೆ ತಿಳಿಯಲು ಸ್ವವಿಳಾಸದ ಕಾರ್ಡು ಇಡಿ.*



**ಸಂಪಾದಕರು**
**'ಹೊಸದಿಕ್ಕು'**
**ಗೀತಾಂಜಲಿ ಬಿಲ್ಡಿಂಗ್**
**(ದಿಗ್ಗಿ ಬಿಲ್ಡಿಂಗ್ ಹತ್ತಿರ)**
**ಅಂಚೆ : ಶಹಾಪುರ.೫೮೫ ೨೨೩**

**ಚಂದಾ ಕಳಿಸುವ ವಿಳಾಸ :**
**ಚಂದ್ರಕಾಂತ ಕರದಳ್ಳಿ**
**ಶಹಾಪುರ ಪೇಟೆ,**
**ಶಹಾಪುರ– ೫೮೫ ೨೨೩**
**ಕಲಬುರ್ಗಿ ಜಿಲ್ಲೆ. (ಕರ್ನಾಟಕ)**

# ಪತ್ರಿಕೆಯ ಅಂತರಂಗದಿಂದ ನಿಮ್ಮ ಅಂತರಂಗಕ್ಕೆ

ಜೂನ್ ೧, ೧೯೭೨ ಶಹಾಪುರದ ಸಾಹಿತ್ಯಿಕ ಲೋಕದಲ್ಲಿ ನೆನಪಿಡುವ ದಿನ. ಈ ನೆಲದಿಂದಲೆ "ಹೊಸದಿಕ್ಕು" ಎನ್ನುವ ಸಾಹಿತ್ಯಿಕ-ಸಾಂಸ್ಕೃತಿಕ ದ್ವೈಮಾಸಿಕ ಪತ್ರಿಕೆಯು ಬಿಡುಗಡೆಯಾಗಿದ್ದು ಒಂದನೆಯದು. ಮೊಟ್ಟಮೊದಲಿಗೆ ಕರ್ನಾಟಕದಾದ್ಯಂತ ಬಂಡಾಯ ಪುಸ್ತಕಗಳನ್ನು ಹೊತ್ತು ಮಾರಾಟ ಮಾಡಲು "ಬಂಡಾಯ ಪುಸ್ತಕ ಜಾಥಾ" ಶಹಾಪುರಕ್ಕೆ ಬಂದದ್ದು ಎರಡನೆಯದು.

ಅಂದು ಸಾಯಂಕಾಲ 6 ಗಂಟೆಗೆ ಪತ್ರಿಕೆಯ ಬಿಡುಗಡೆ ಸರಳ ಸಮಾರಂಭ. ಸರಕಾರಿ ಪದವಿ ಪೂರ್ವ ಕಾಲೇಜಿನ ಒಳ ಆವರಣದಲ್ಲಿ ಆಸಕ್ತ ಜನರಿಂದ ತುಂಬಿದ ಸಭಾಂಗಣ. ಇಡೀ ದಿನವೆಲ್ಲಾ ಸುಡುಬಿಸಿಲಿನ ಬೇಗುದಿಯಲ್ಲಿ ಬೇಯಿಸಿದ ಸೂರ್ಯ ಅಸ್ತಮಿಸಿದ್ದರೂ ಮೈ-ಮುಖದ ಮೇಲೆಲ್ಲಾ ಬೆವರಿಳಿಯುತ್ತಿರುವ ಚಡಪಡಿಕೆ. ಆ ಚಡಪಡಿಕೆಯ ನಡುವೆಯೂ ಕುತೂಹಲದ ಕ್ಷಣಗಳು.

ಪತ್ರಿಕೆಯ ಮೊದಲ ಸಂಚಿಕೆಯನ್ನು ಬಿಡುಗಡೆ ಮಾಡಿದ ಕಲ್ಬುರ್ಗಿಯ "ಗ್ರಿನೋಬಲ್ಸ್" ದಿನಪತ್ರಿಕೆಯ ಸಂಪಾದಕರಾದ ರಾಜೇಂದ್ರ ಪಾಟೀಲರು ಮಾತನಾಡುತ್ತಾ ಪತ್ರಿಕೆ ನಡೆಸುವುದು ಬಹಳ ಕಷ್ಟಸಾಧ್ಯವಾದ ಕೆಲಸ. ಅದೂ ಸಾಹಿತ್ಯಿಕ ಪತ್ರಿಕೆ. ಕೆಲವೇ ಜನರ ಆಸಕ್ತ ಕ್ಷೇತ್ರ. ಪತ್ರಿಕೆಯ ಸ್ಟಾಲ್‌ಗಳಲ್ಲಿ ಮಾರಾಟವಾಗುವುದಿಲ್ಲ. ಚಂದಾದಾರರ ಮೇಲೆ ಅವಲಂಬನ. ಇಂಥ ಸ್ಥಿತಿಯಲ್ಲಿ ಸಾಹಿತ್ಯಿಕ ಪತ್ರಿಕೆಯನ್ನು ಹೊರತರುವ ಕೆಲಸಕ್ಕೆ ನಿಮ್ಮ ಪತ್ರಿಕೆಯ ಬಳಗವು ಕೈ ಹಾಕಿದೆ. ನಾನೊಬ್ಬ ಪತ್ರಕರ್ತನಾಗಿ, ನನ್ನ ಅಭಿಪ್ರಾಯಗಳನ್ನು ತಿಳಿಸಿದ್ದೇನೆ. ನೀವೆಲ್ಲರು ಯುವಕರಿರುವುದರಿಂದ ಪತ್ರಿಕೆಯನ್ನು ಮುನ್ನಡೆಸಬಲ್ಲಿರಿ ಎಂಬ ಆತ್ಮವಿಶ್ವಾಸವೂ ನನಗಿದೆ ಎಂದರು.

ಅತಿಥಿಯಾಗಿ ಆಗಮಿಸಿದ್ದ ಹರಪನಹಳ್ಳಿಯ ಎ. ಡಿ. ಬಿ. ಕಾಲೇಜಿನ ಪ್ರೊ. ಎಸ್. ಎಸ್. ಹಿರೇಮಠ ಮಾತನಾಡಲು ನಿಂತಾಗ ಇಡೀ ಸಭಾಂಗಣ ಸ್ತಬ್ಧವಾಗಿತ್ತು. ನಾಡಿನ ಅನೇಕ ಪತ್ರಿಕೆಗಳ ಒಡನಾಟವಿರುವ ಹಿರೇಮಠರು ಮಾತನಾಡಿ "ಸಂಕ್ರಮಣ" "ಋಜುವಾತು" "ಶೂದ್ರ" ಮೊದಲಾದ ಪತ್ರಿಕೆಗಳು ನಡೆದಿರುವ ದಾರಿಯನ್ನು ಉಲ್ಲೇಖಿಸಿ. ಅವುಗಳ ದಟ್ಟ ಪರಿಚಯವಿರುವ ತಮಗೆ ಎಚ್ಚರದ ಮಾತುಗಳೇನು ಹೇಳಬೇಕಾಗಿಲ್ಲ ಪತ್ರಿಕೆಯು ಯಾರ ಮುಲಾಜಿ-ಮುರುವತ್ತುಗಳಿಗೆ ಒಳಗಾಗದೆ ಒಂದು ಸೈದ್ಧಾಂತಿಕ ನಿಲುವಿನಿಂದ ಮುನ್ನಡೆಯಲಿ.

ಹೈದ್ರಾಬಾದ ಕರ್ನಾಟಕ ಎಂಬ ಮಿತಿಯನ್ನು ದಾಟಿ ಕರ್ನಾಟಕ ಎಂಬ ವ್ಯಾಪಕತೆ ಯಲ್ಲಿ ಪತ್ರಿಕೆ ತನ್ನ ಆಲೋಚನೆಯ ಹರಹುಗಳನ್ನು ಚೆಲ್ಲಲಿ ಎಂದು ಆಶಿಸಿದರು.

ಅಧ್ಯಕ್ಷತೆ ವಹಿಸಿದ್ದ ಪುರಸಭಾಧ್ಯಕ್ಷ ಚಂದ್ರಶೇಖರ ಆರಬೋಳರು ಮಾತನಾಡಿ ಪತ್ರಿಕೆಯನ್ನು ಪ್ರಾರಂಭಿಸಿದ್ದೀರಿ ಅದನ್ನು ನಾವು-ನಿವೆಲ್ಲರೂ ಎತ್ತಿ ಹಿಡಿಯೋಣ ಸಾಹಿತ್ಯಕ್ಕೆ ಹುಲಸಾದ ಈ ನೆಲದಲ್ಲಿ ಪತ್ರಿಕೆ ನಿಲ್ಲಬಾರದು. ನಿರಂತರವಾಗಿ ಮುನ್ನಡೆ ಯುವ ಕ್ರಿಯೆಯಲ್ಲಿ ನಾವೆಲ್ಲರೂ ಪಾಲುಗಾರರಾಗೋಣ ಎಂದು ಆಶಯದ ಮಾತುಗಳನ್ನಾಡಿದರು.

ಕಾರ್ಯಕ್ರಮವನ್ನು ನಿರ್ವಹಣೆ ಮಾಡಿ ಪ್ರಸ್ತಾವನೆ ರೂಪದಲ್ಲಿ ಮಾತನಾಡಿದ ನಾನು ಪತ್ರಿಕೆಯ ಇತಿ-ಮಿತಿಗಳನ್ನು ಗೊತ್ತು-ಗುರಿಗಳನ್ನು ಇಟ್ಟುಕೊಂಡು ಸುಮಾರು ಒಂದು ವರ್ಷ ಕಾಲ ಚಿಂತನ ನಡೆಸಿ ಪತ್ರಿಕೆ ನಡೆಸುವ ನಿರ್ಧಾರಕ್ಕೆ ಬಂದಿದ್ದೇವೆ. ಯಾವ ಕಾರಣಕ್ಕೂ ಪತ್ರಿಕೆ ನಿಲ್ಲಬಾರದು ಎಂಬ ಭಾವನೆ ನಮಗಿದೆ. "ಸಂಕ್ರಮಣ" ಪತ್ರಿಕೆಯ ಪ್ರೇರಣೆಯಿಂದ ಹುಟ್ಟಿದ ಈ ಪತ್ರಿಕೆ ಅದರಂತೆಯೆ ಬಾಳಬೇಕಾಗಿದೆ, ಬೆಳೆಯಬೇಕಾಗಿದೆ. ಕಾರಣ ಈ ನಾಡಿನ ಬರಹಗಾರರು ಕಳಿಸಿದ ಲೇಖನಗಳನ್ನು ಪತ್ರಿಕೆಯ ಪುಟಗಳ ಚೌಕಟ್ಟಿನಲ್ಲಿ ಆಯ್ಕೆ ಮಾಡಬೇಕಾಗುತ್ತದೆ. ಲೇಖನಗಳು ಆದಷ್ಟು ಚಿಕ್ಕ-ಚೊಕ್ಕ ಇದ್ದಷ್ಟು ಚೆನ್ನ. ಈ ಸಂಚಿಕೆಯಲ್ಲಿ ಕೆಲವನ್ನು ಮಾತ್ರ ಪ್ರಕಟಪಡಿಸಲು ಸಾಧ್ಯವಾಗಿದೆ. ಈ ಭಾಗದ ಲೇಖಕರನ್ನು ಬೆಳೆಸುವ, ಪ್ರತಿಭೆಗಳನ್ನು ಗುರುತಿಸುವ, ಈ ನಾಡಿನ ಪರಿಚಯವನ್ನು ಮಾಡುವ ಹೊಣೆ ಪತ್ರಿಕೆಯು ಹೊರಬಲ್ಲದು. ನಾಡಿನ ಆಸಕ್ತರೂ ಈ ಭಾಗದ ಓದುಗ ಹಾಗೂ ಬರಹಗಾರರು ಚಂದಾದಾರರಾಗುವ ಮೂಲಕ ಪತ್ರಿಕೆಯ ಆರ್ಥಿಕ ಸ್ಥಿತಿಗೆ ಮುಂದಾದರೆ ಪತ್ರಿಕೆ ನಿರಂತರವಾಗಿ ಮುನ್ನಡೆಯಬಲ್ಲದು ಎಂದು ನನ್ನ ಮಾತು ಗಳನ್ನು ತಿಳಿಸಿದೆ.

ಪತ್ರಿಕೆಯ ಮೊದಲ ಸಂಚಿಕೆಯನ್ನು ನಾಡಿನ ಸಾಹಿತಿಗಳಿಗೆ, ಪ್ರಮುಖ ಆಸಕ್ತರಿಗೆ ಕಳಿಸುವ ಹೋಣೆಯನ್ನು ಹೊನ್ಕಲ್ ಅವರು ವಹಿಸಿದರು. ಹಲವಾರು ಜನರು ತಮ್ಮ ಅಭಿಪ್ರಾಯಗಳನ್ನು ವ್ಯಕ್ತಪಡಿಸಿದ್ದಾರೆ. ನಾಡಿನ ಸಾಹಿತಿಗಳಿಂದ ಸಾಹಿತ್ಯಾಸಕ್ತರಿಂದ ಪತ್ರಗಳ ಮಹಾಪೂರವೇ ಹರಿದು ಬಂದಿವೆ, ಅದೇ ರೀತಿ ಯಲ್ಲಿ ಇನ್ನೂ ಚಂದಾಹಣ ಹರಿದು ಬರಬೇಕಿದೆ. ಹಲವಾರು ಹಿರಿಯ ಸಾಹಿತಿ ಗಳು ಚಂದಾ ಹಣವನ್ನು ಕಳಿಸಿದ್ದಾರೆ, ಇನ್ನು ಹಲವರು ಮುಂದೆ ಕಳಿಸುವ ಕುರಿತು ಪತ್ರ ಬರೆದಿದ್ದಾರೆ.

ನಾಡಿನ ಖ್ಯಾತ ವಿದ್ವಾಂಸರೂ ಪ್ರಖ್ಯಾತ ಅಂಕಣ ಬರಹಗಾರರೂ ಆದ ಹಾ. ಮಾ. ನಾಯಕ ಅವರು ನಮ್ಮ ಬಳಗಕ್ಕೆ ಬರೆದ ಪತ್ರವೊಂದನ್ನು ಇಲ್ಲಿ ಪ್ರಕಟಿಸಿದ್ದೇವೆ.

ಡಾ. ಹಾ. ಮಾ. ನಾಯಕ ಮೇ ೩೦, ೮೨
"ಗೋಧೂಳಿ"
ಜಯಲಕ್ಷ್ಮೀಪುರಂ
ಮೈಸೂರು-೫೭೦೦೧೨

ಪ್ರಿಯಶ್ರೀ ಹೊನ್ನಕಲ್

ನೀವು ಪ್ರೀತಿಯಿಂದ ಕಳಿಸಿದ ನಿಮ್ಮ ದ್ವೈಮಾಸಿಕ "ಹೊಸದಿಕ್ಕು" ಮೊದಲ ಸಂಚಿಕೆ ಬಂದಿದೆ. ಈ ಸೌಜನ್ಯಕ್ಕೆ ಋಣಿಯಾಗಿದ್ದೇನೆ. ಆ ಭಾಗದಿಂದ ಆಗಬೇಕಾಗಿದ್ದ ಒಂದು ಒಳ್ಳೆಯ ಕೆಲಸವನ್ನು ನಿರ್ವಹಿಸಿದ್ದೀರಿ. ನಿಮಗೆ ಎಲ್ಲ ಶುಭಗಳು ಇರಲಿ ಎಂದು ಹೃದಯ ಪೂರ್ವಕವಾಗಿ ಹಾರೈಸುತ್ತೇನೆ. ದ್ವೈಮಾಸಿಕಕ್ಕೆ ಅಗತ್ಯವಾದ ಒಳ್ಳೆಯ ಬರಹಗಳು ಸಿಕ್ಕುವುದು ಕಷ್ಟ. ಆದ್ದರಿಂದ ಆರಂಭದಲ್ಲಿ ನೀವು ಇದನ್ನು ತ್ರೈಮಾಸಿಕವಾಗಿ ಕೆಲವರ್ಷ ನಡೆಸುವುದು ಸೂಕ್ತವೆಂದು ತೋರುತ್ತದೆ. ಯೋಚಿಸಿ. ಕನ್ನಡ ಓದುಗರಿಗೆ ನಿಮ್ಮ ಪ್ರಕಟಣೆ ನಿಜವಾಗಿಯೂ "ಹೊಸದಿಕ್ಕು" ಗಳನ್ನು ತೋರಿಸುವಂತಾಗಲಿ.

ವಿಶ್ವಾಸದ
ಹಾ ಮಾ ನಾ

ಎಂಬ ಒಲವಿನ ಪತ್ರವನ್ನು ಬರೆದು ಸಲಹೆ ಸೂಚನೆಗಳನ್ನು ಕೊಟ್ಟು ೫೦-೦೦ ರೂ. ವಾರ್ಷಿಕ ಚಂದಾಹಣವನ್ನು ಚೆಕ್ ಮುಖಾಂತರ ಕಳಿಸಿ ಪ್ರೋತ್ಸಾಹಿಸಿದ್ದಾರೆ. ಮಾಡುವ ಕೆಲಸಕ್ಕೆ ನೂರು ವಿಘ್ನಗಳು ಇರುವ ಸಂದರ್ಭದಲ್ಲಿ ಪ್ರೋತ್ಸಾಹಪರ ಮಾತನಾಡಿದ ನಾಡಿನ ಧೀಮಂತ ಸಾಹಿತಿಗಳನೇಕರ ಮಾತುಗಳಿಗೆ ನಾವು ಮೂಕರಾಗಿದ್ದೇವೆ.

ನಾವು ಚಂದಾ ಹಣ ಕೇಳಲು ಹೋದಾಗ ಇಲ್ಲವೆನ್ನದೆ ಚಂದಾದಾರರಾಗಿದ್ದಾರೆ. ಪತ್ರಿಕೆಯ ಆರ್ಥಿಕ ಸ್ಥಿತಿಗೆ ಬೆನ್ನೆಲುಬಾಗಿ ಜಾಹೀರಾತು ಕೊಟ್ಟು ಸಹಕರಿಸಿದ ಜಾಹೀರಾತುದಾರರಿದ್ದಾರೆ. ಚಂದಾ ಮಾಡಿಸಲು ರಸೀದಿ ಪುಸ್ತಕಗಳನ್ನು ಕಳಿಸಿದಾಗ

ಚಂದಾ ಮಾಡಿ ಪತ್ರಿಕೆಯ ಪ್ರಸಾರಕ್ಕೆ ಕಾರಣರಾದ ಆತ್ಮೀಯ ಗೆಳೆಯರಿದ್ದಾರೆ. ಅದೇ ರೀತಿ ರಸೀದಿ ಪುಸ್ತಕಗಳನ್ನು ಇಟ್ಟುಕೊಂಡು ಏನೂ ಹೇಳದ ಗೆಳೆಯರೂ ಇದ್ದಾರೆ. ತಕ್ಷಣ ಅಂಥವರು ಸದಸ್ಯರನ್ನಾಗಿ ಮಾಡಿದ್ದರೆ ಸದಸ್ಯರ ಪಟ್ಟಿ ಹಾಗೂ ಚಂದಾ ಹಣ ಕಳಿಸಬೇಕು ಇಲ್ಲದಿದ್ದಲ್ಲಿ ರಸೀದಿ ಪುಸ್ತಕಗಳನ್ನಾದರೂ ಪತ್ರಿಕೆಯ ಬಳಗಕ್ಕೆ ವಾಪಸ್ ಕೊಡಬೇಕು.

"ಪತ್ರಿಕೆಯ ಅಂತರಂಗದಿಂದ ನಿಮ್ಮ ಅಂತರಂಗಕ್ಕೆ" ಅಂಕಣದಲ್ಲಿ ಹೋದ ಸಾರೆ ಹೊನ್ಕಲ್ ಬರೆದಿದ್ದರು. ಈ ಸಾರೆ ನಾನು ಬರೆದಿದ್ದೇನೆ. ಮುಂದೆಯೂ ಈ ಅಂಕಣದಲ್ಲಿ ಸೂಗಯ್ಯ ಹಿರೇಮಠರೂ ತಿಮ್ಮಯ ಫುರ್ಲೆಯವರು ಬರೆಯುಲಿದ್ದಾರೆ.

ಇದು ಈ ನೆಲದ ಪತ್ರಿಕೆಯಾಗಿರುವುದರಿಂದ ಇದು ನಮ್ಮದೇ ಪತ್ರಿಕೆ ಎಂಬ ಭಾವನೆ ತಮ್ಮಲ್ಲಿ ಮೂಡಿದರೆ ಪತ್ರಿಕೆಯ ಹುಟ್ಟು ಸಾರ್ಥಕ ಎಂಬ ಅಂಶವನ್ನು ತಮ್ಮ ಗಮನಕ್ಕೆ ತರುವುದರ ಮೂಲಕ ಪತ್ರಿಕೆಗೆ ಚಂದಾದಾರರಾಗಿರಿ. ತಮ್ಮ ಗೆಳೆಯರನ್ನು ಚಂದಾದಾರರನ್ನಾಗಿಸಿರಿ. ತಾವು ಕೊಡುವ ಹಣ "ಹೊಸ ದಿಕ್ಕು" ಪತ್ರಿಕೆಯ ಬೆಳವಣಿಗೆಯ ಸಂಕೇತ ಎಂಬ ಮಾತಿನೊಡನೆ ನಾನು ಮೌನವಾಗುತ್ತೇನೆ.

● ಚಂದ್ರಕಾಂತ ಕರದಳ್ಳಿ

# "ಜೆ. ಕೃಷ್ಣಮೂರ್ತಿ - ನನಗೆ ಕಂಡ ಹಾಗೆ"



## ಆನಂದ ವಿ. ಪಾಟೀಲ್

ಜೆ. ಕೃಷ್ಣಮೂರ್ತಿಯರನ್ನ ಆಧ್ಯಾತ್ಮದ ಜನಗಳ ವರ್ಗದಲ್ಲಿಯೇ ನೋಡಬೇಕಾಗುತ್ತದೆ. "ಆಧ್ಯಾತ್ಮ" ಅನ್ನುವುದಕ್ಕಿಂತ ಕನ್ನಡದಲ್ಲಿ ಬಳಕೆಗೆಬಂದ "ಅನುಭಾವ" ಹೆಚ್ಚು ಸೂಕ್ತ. "ಆಧ್ಯಾತ್ಮ" ಆತ್ಮದ ವಿಚಾರ ಮುಂತಾಗಿ ಕೆಲವೊಂದು ಮಿತಿಗಳನ್ನ ಹೇಳುತ್ತದೆ. ಅನುಭಾವ ಎನ್ನುವಾಗ ಈ ಗೊಂದಲ ಕಾಡುವುದಿಲ್ಲ. ಅದೇನಿದ್ದರೂ ನನ್ನ ಶಾಬ್ದಿಕ ಬಳಕೆಯ ವಿಷಯ. ಈ ಅನುಭಾವದ ಸಂಗತಿ, ಇಂಗ್ಲೀಷಿನಲ್ಲಿ 'Spiritual' ಅನ್ನುವಂಥದ್ದು ಎಲ್ಲರಲ್ಲೂ ಇದ್ದೇ ಇದೆ. ಸಹಜವಾಗಿದೆ. ಒಂದಿಲ್ಲಾ ಒಂದು ಬಗೆಯಲ್ಲಿ ಕಾಣಸುತ್ತದೆ – ಹೀಗೆ ಇವತ್ತು ಬಹಳಷ್ಟು ಜನ ವಿದ್ವಾಂಸರು, ಮಾನಸಶಾಸ್ತ್ರಜ್ಞರು ವಿಜ್ಞಾನಿಗಳು ಎಲ್ಲರೂ ಸೇರುತ್ತಾರೆ ಇದರಲ್ಲಿ. ಹೇಳುತ್ತಾರೆ, ಇನ್ನು ಸಾಮಾಜಿಕ ಬದುಕಿಗೇ ತೀವ್ರವಾಗಿ ಅಂಟಿಕೊಂಡಿರುವವರು ಇದನ್ನ ಒಪ್ಪುವುದಿಲ್ಲ, ಅಥವಾ ಅದರಗೋಜಿಗೆ ಹೋಗದವರೂ ಇದ್ದಾರೆ. ಅದೇನೇ ಇದ್ದರೂ ಜೆ. ಕೃಷ್ಣಮೂರ್ತಿಯವರ ವಿಚಾರಗಳು ಮೇಲಿನ ಮೊದಲ ಗುಂಪಿನ ಜನಗಳಲ್ಲಿ ಪ್ರಚುರಗೊಂಡುದು, ವಿಚಾರ ಮಾಡಲು ಹಚ್ಚಿದುದು ಸಹಜವೇ ಇದೆ. ಆದರೆ ಸಾಮಾಜಿಕ ಬದುಕನ್ನ ತಮ್ಮದಾಗಿಸಿಕೊಂಡ ಎರಡನೆಯ ಗುಂಪಿನವರಲ್ಲೂ ಜೆ. ಕೆ. ಹೆಚ್ಚು ಕೇಳಿಬಂದರು. ಹೀಗೆ ಕೇಳಿಬಂದುದಕ್ಕೆ ಕಾರಣ ಅವರ ವಿಶಿಷ್ಟವಾದ ವಿಚಾರ ಸರಣಿ. ಈ ಮೊದಲು ಇದ್ದ ವಿಚಾರಗಳಲ್ಲಿ ವಿಭಿನ್ನವಾಗಿ ಕಂಡದ್ದು, ಸ್ವಲ್ಪ ಬೇರೆಯಾಗಿಯೆ ಕಂಡದ್ದು, ಇದಕ್ಕೂ ಹೆಚ್ಚಿಗೆ ಹೇಳುವುದಾದರೆ ಸಾಮಾಜಿಕ ಸುಧಾರಣೆಯ ಕುರಿತಾಗಿ ಇದ್ದ ವಿಚಾರಗಳಿಗೆ ಜೆ. ಕೆ. ಅವರ ವಿಚಾರಗಳು ಪೂರಕವಾಗಿದ್ದವು ಎನ್ನುವಂಥದ್ದು. ಉದಾಹರಣೆಗೆ ಒಂದ್ಯಾವುದಾದರೂ ವಿಚಾರ ತೆಗೆದುಕೊಳ್ಳುವುದಾದರೆ, ಹಾಂ, ಗುರುಗಳು, ಗುರುಪೀಠಗಳು ಮುಂತಾಗಿ ಯಾರನ್ನು, ಯಾವುದನ್ನು ಒಪ್ಪಿಕೊಳ್ಳದೇ ಇರುವುದು, ಮುಂತಾದುವು.

ಆದರೆ ಜೆ. ಕೃಷ್ಣಮೂರ್ತಿಯವರು ಸಾಮಾಜಿಕವಾಗಿ ಮಾತನಾಡಿದರೆ ? ವ್ಯಕ್ತಿಯನ್ನು ಗಮನದಲ್ಲಿರಿಸಿ ಮಾತನಾಡಿದರೆ ?; ಬಹಳ ಸುಲಭವಾಗಿ ಪಾರಾಗಿ ಬಿಡಬಹುದು, ಅವರು ಈ ಜಗತ್ತಿನ ಸತ್ಯದ ಕುರಿತಾಗಿ ಯೋಚಿಸಿದರು, ಮಾತ ನಾಡಿದರು ಎಂದು, ಆದರೆ ಜೆ. ಕೃಷ್ಣಮೂರ್ತಿಯವರು ಒಂದು ಸಮೂಹದಲ್ಲಿ ಮಾತಾಡುವಾಗಲೂ ಪ್ರತ್ಯೇಕ ವ್ಯಕ್ತಿಯನ್ನೇ ನೇರವಾಗಿಟ್ಟುಕೊಂಡು ಮಾತನಾಡಿ ದರು. ಏಕೆಂದರೆ ಅವರು ಯಾವ ಸಾಮಾಜಿಕ ಸಮಸ್ಯೆಯ ಬಗೆಗೂ ಮಾತನಾಡ ಲಿಲ್ಲ, ಅದರ ನಿವಾರಣೆಯ ಬಗೆಗೂ ಮಾತನಾಡಲಿಲ್ಲ. ಅವರು "ವ್ಯಕ್ತಿ" ಯನ್ನು ಗಮನದಲ್ಲಿರಿಸಿಯೇ ಮಾತನಾಡಿದರು ಎನ್ನುವಾಗಲೇ ಈ ಮಾತನ್ನೂ ಹೇಳಿಬಿಡು ವುದು ಒಳಿತು. 'Individual' ಅದು 'Indivisible' ಪ್ರತ್ಯೇಕವಾಗಿ ಒಡೆದು ಹಾಕುವುದಲ್ಲ, ಇಡಿಯಾಗಿಯೇ ನೋಡುವುದು. "ವ್ಯಕ್ತಿ" ಎಂದಾಗ ಅದು ಸಮಾಜ ದಿಂದ ಬೇರೆ ಎಂದು ಮುಂತಾಗಿ ಅಲ್ಲ ಎನ್ನುತ್ತಾರೆ ಅವರು, ಅಂತೂ ಅದು ಈ ವಿಶ್ವದ ಸತ್ಯವೇ ಆಗಿದೆ ನಮ್ಮ ಅರ್ಥದಲ್ಲಿ. ಆದರೆ ಅದು ನಮ್ಮ ತಲೆಗೆ, ಮನಸ್ಸಿಗೆ ಹೋಗಬೇಕಾದರೆ ವ್ಯಕ್ತಿಯ ಮೂಲಕವೇ, ಮತ್ತು ಏನೇ ಬದಲಾವಣೆಯಾಗು ವುದು ವ್ಯಕ್ತಿಯಲ್ಲಿಯೇ.

ಹಾಗಾದರೆ ಜೆ. ಕೃಷ್ಣಮೂರ್ತಿಯವರ ವಿಶೇಷ ಏನು ? ಅನೇಕರಿಗೆ ಹಿಡಿಸಿದ ಹಾಗೆ ಈ ಲೇಖಕನಿಗೂ ಅವರ ವಿಚಾರಸರಣಿ ಬಹಳ ಹಿಡಿಸಿತು. ಬಹುಶಃ ಈ ಲೇಖನಕ್ಕೆ ಈ ಬಹಳ ಹಿಡಿಸುವಿಕೆಯೇ ತೀವ್ರ ಕಾರಣವಾಗಿದೆ. ಅಂದರೆ ಇಲ್ಲಿ ಲೇಖಕನೇ ಜೆ. ಕೆ. ಅವರನ್ನ ನೋಡಿದ ಬಗೆ ಇದೆ. ಹೀಗಾಗಿ ಅದರದೇ ಆದ ಮಿತಿಗಳು ಸಹಜವಾಗಿಯೇ ಇರುತ್ತವೆ.

ಜೆ. ಕೆ. ಅವರ ವಿಶೇಷತೆಗಳನ್ನು – ಅಥವಾ ತಟ್ಟನೆ ಅವರ ಬಗೆಗೆ ಹೇಳಿ ಬಿಡುವ ಸಂಗತಿಗಳು ಇವು.

ಅನುಭಾವದ ಆತ್ಯಂತಿಕ ತೀವ್ರತೆ. ಅವರ ಮಾತುಗಳಲ್ಲೆಲ್ಲ ಎರಡು ಸಂಗತಿ ಗಳು ಗಮನಕ್ಕೆ ಬರುತ್ತವೆ: ಒಂದು ನಮ್ಮ ಮನಸ್ಸಿನ ಗೊಂದಲದ ಸ್ಥಿತಿ, ಅದರಿಂದ ಬಿಡುಗಡೆಯಾಗಲೇ ಬೇಕಿರುವುದು, ಇನ್ನೊಂದು ಇದೆಲ್ಲ ಸಾಧ್ಯವಾಗುವುದು ಹೇಗೆ? ನಾನಿಲ್ಲಿ Meditation ಎನ್ನುವ ಶಬ್ದ ಬಳಸಬೇಕೆಂದು ಮಾಡಿದೆ. ಆದರೆ ಅದರ ಬಳಕೆ ನಮ್ಮಲ್ಲಿ ಇರುವುದಕ್ಕೂ ಜೆ. ಕೆ. ಯವರಲ್ಲಿ ಕಾಣುವುದಕ್ಕೂ ವ್ಯತ್ಯಾಸವಿದೆ. ಆದರೆ ಅವರ ಮಾತಿನಲ್ಲಿ ಅರ್ಥಪಾಲು ಇದಕ್ಕೇ ಮೀಸಲಾಗಿದೆ, ಅಥವಾ ಜೆ. ಕೆ. ಅವರದೇ ಆದ ವಿಶೇಷವೆಂದರೆ ಅದು.

ಅನುಭಾವದ ವಿಚಾರಸರಣಿಗಳಲ್ಲಿ, ಮೇಲುನೋಟಕ್ಕೆ, ಎರಡು ಬಗೆಗಳನ್ನು ಗುರುತಿಸಲು ಸಾಧ್ಯವಾಗುತ್ತದೆ. ಅದು ಸಕಾರಾತ್ಮಕವಾಗಿರುವಂಥದು ಮತ್ತು ನಕಾರಾತ್ಮಕವಾಗಿರುವಂಥದು ಎಂದು. ಜೆ. ಕೃಷ್ಣಮೂರ್ತಿಯವರನ್ನು ಈ ನಕರಾತ್ಮಕ ಗುಂಪಿನಲ್ಲಿ ಸೇರಿಸಬೇಕಾಗುತ್ತದೆ. ಬೌದ್ಧಧರ್ಮದ ಬದಿಯಲ್ಲಿಯೇ ಇಟ್ಟು ಅವರ ವಿಚಾರಗಳನ್ನು ನೋಡಿದ ವಿದ್ವಾಂಸರಿದ್ದಾರೆ. ಮನಸ್ಸಿನ ಅಪೂರ್ಣತೆಗಳು, ಕ್ಷುಲ್ಲಕ ಸಂಗತಿಗಳು, ಇವನ್ನೆಲ್ಲ ವಿಶ್ಲೇಷಿಸುತ್ತ ಅವನ್ನೆಲ್ಲ ಒಟ್ಟಾಗಿ ತ್ಯಜಿಸುವ ಅನಿವಾರ್ಯತೆಯನ್ನು ಅವರು ಮುಂದಿಡುತ್ತಾರೆ. ಜೆ. ಕೆ. ಅಂಥ ವಿಚಾರಗಳನ್ನು ಇಡುವ ಬಗೆಯೂ ವಿಶೇಷವಾಗಿದೆ. ಯಾರು ಅವರೊಡನೆ ಮಾತನಾಡಲು ಹೋಗುತ್ತಾರೊ, ಕೇಳಲು ಹೋಗುತ್ತಾರೊ ಅವರಿಗೇ ಪ್ರಶ್ನೆಗಳನ್ನು ಹಾಕಿ ಅವರ ಉತ್ತರಗಳಲ್ಲಿಯೇ ಇದನ್ನ ಅವರು ತೋರಿಸಿಕೊಡುತ್ತಾರೆ. ಅವರ ಈ ವಿಚಾರಕ್ಕೆ ಅವರದೇ ಕೆಲವಾಕ್ಯಗಳನ್ನ ಉದ್ಧರಿಸಬಹುದು :

All of us function from a centre and what is that centre ? the centre of fear, anxiety, greed, pleasure, despair, hope, dependency, ambition, comparison–it is that from, which we think and act.

'Man has lived with fear'

'Thought is obviously the response of memory. If you had no memory of road to your house, you would not get home. So thought no only breeds and Sustains fear and pleasure, but thought is also necessary to function, to act efficiently............

thought also breads fear and pleasure and therefore pain... it has its roots in the past; thought is never new'.

ಹೀಗೆಯೇ ಸಾಗುತ್ತದೆ ಅವರ ವಿಚಾರಸರಣಿ. ನಾವು ನಮ್ಮ ಮನಸ್ಸಿನ ಕ್ರಿಯೆಗಳನ್ನು ನೋಡುತ್ತ ಹೋದರೆ, ಅಲ್ಲಿ ನಡೆಯುವುದೆಲ್ಲ ಭಯದಿಂದ ಕೂಡಿರುವುದು, ಸ್ವತಂತ್ರವಾಗಿಲ್ಲದೇ ಇರುವುದು, ಮುಂತಾದೆಲ್ಲ ಗೋಚರವಾಗುತ್ತದೆ. ನಮ್ಮ "ಇವತ್ತು" ಯಾವತ್ತು "ನಿನ್ನೆ" ಯದರ ಮುಂದುವರಿಕೆಯೇ ಆಗಿರುತ್ತದೆ. ಅದರಿಂದ ಬಿಡುಗಡೆಯೇ ಇಲ್ಲ. ನಮ್ಮ ದೇವರು ಧರ್ಮ, ತತ್ವ ಎಲ್ಲವನ್ನೂ ಸಾರಾಸಗಟಾಗಿ ಹೀಗೆಯೇ ಜೆ. ಕೆ. ಬದಿಗೆ ಸರಿಸಿಬಿಡುತ್ತಾರೆ. ಇವೆಲ್ಲ ನಮ್ಮ ಮನಸ್ಸಿನ ಮೂಲಕವಾಗಿಯೇ ಪ್ರಾರಂಭವಾಗುತ್ತವೆ.

ಹಾಗಾದರೆ ಜೆ. ಕೃಷ್ಣಮೂರ್ತಿ ನಮ್ಮ ಈ ಅವಸ್ಥೆಯಿಂದ ಬಿಡುಗಡೆಯನ್ನ ಹೇಳಿದರೆ ? ಇಲ್ಲ ಬಿಡುಗಡೆಯನ್ನ ಹೇಳಲಿಲ್ಲ. ಆದರೆ ಅದು ಹೇಗೆ ತಾನೇ ಸಾಧ್ಯವಾಗುತ್ತದೆ ಎಂಬುದನ್ನ ತೋರಿಸಿಕೊಟ್ಟರು. ಏಕೆಂದರೆ ಬಿಡುಗಡೆಯಾಗಬೇಕಲ್ಲ ಎಂಬುದೇ ಒಂದು ವಿಚಾರವಾಗಿಬಿಡುತ್ತದೆ !

ಇಲ್ಲಿಯೇ ಅವರು ಬಹುಶಃ ಎಲ್ಲರಿಗಿಂತ ಭಿನ್ನವಾಗುವುದು, ಅವರದೇ ಆದ ವಿಶೇಷ ಹೇಳುವುದು. ಅವರು ಹೇಳುತ್ತಾರೆ: "ಅರಿತುಕೊಳ್ಳುವುದು". ಇದಕ್ಕಾಗಿ ಯಾವುದೇ ಶ್ರಮವಹಿಸುವುದಾಗಬಾರದು, ಪ್ರಯತ್ನಿಸಬಾರದು, ತ್ಯಜಿಸಬಾರದು, ನಿರ್ಬಂಧಿಸಬಾರದು, ಸುಧಾರಣೆಯಲ್ಲಿ ಇದು. ಹಾಗಾದರೆ ಹೇಗೆ ? ಮಾಡುವುದಾದರೂ ಏನು ? ಏನೂ ಮಾಡುವ ಹಾಗೆಯೇ ಇಲ್ಲ. ಏನನ್ನಾದರೂ ಮಾಡುವ ಹಾಗಿದ್ದಲ್ಲಿ ಅದು ಮನಸ್ಸಿನ ಪ್ರಪಂಚಕ್ಕೆ ಸೇರಿ ಹೋಗುತ್ತದೆ.

ಈ ಅರ್ಥ ಮಾಡಿಕೊಳ್ಳುವುದು ಹೀಗೆ, ಅವರು ಹೇಳುತ್ತಾರೆ :

'You have to observe choiselessly without any distortion of desire or of pleasure or of fear – just observe actually what you are without escape. And do not name what you see, merely observe Then you will have the passion, the energy to observe, and in that observation there comes a tremendous change'

'......then you are not living according to some psychologist or some priest or some doctor. To find out turch you have to be completely free of all that, to stand alone. And standing alone is to turn your back on society'

'All this demand a meditative mind, a mind that is capable of looking silently'

ಈ ಮೌನವಾಗಿ ನೋಡುವುದೇ ಒಟ್ಟಾಗಿ ಜೆ. ಕೆ. ವಿಶೇಷ. ಹೀಗೆ ನೋಡುವಾಗ ಮನಸ್ಸು ತನ್ನ ಅವಸ್ಥೆಯನ್ನ ಮೀರಿ ಆಚೆಗೆ ದಾಟುತ್ತದೆ. ಆಗಲೇ ಅದು ಸಾಧ್ಯವಾಗುವುದು. ಆಗ ಅದಕ್ಕೆ ಕಾಲದ ಕಟ್ಟು ಇರುವುದಿಲ್ಲ. ಆದರೆ ಇದ್ಯಾವುದೂ ಪ್ರಯತ್ನದಿಂದ, ಉದ್ದೇಶಪಟ್ಟು ಆಗಬೇಕಾದದ್ದನ್ನು ಕೃಷ್ಣಮೂರ್ತಿ ಹೇಳುವುದಿಲ್ಲ. ಆದರೆ ಇಂಥ ಅವಸ್ಥೆಯ ಅಗತ್ಯವಿರುವುದರಿಂದ ನಮ್ಮ ಜೀವನದಲ್ಲಿ ಒಂದು ಬಗೆಯ ಬದಲಾವಣೆ ತರುವುದನ್ನ ಅವರು ಸೂಕ್ಷ್ಮವಾಗಿಯಾದರೂ ಹೇಳುತ್ತಾರೆ.

Complete harmony means that the mind as well as the organism must be extraordinarily sensitive; therefore one has to go into the whole question of diet, exercise, and living properly

ಈ ನೋಡುವುದು, ಅರ್ಥಮಾಡಿಕೊಳ್ಳುವುದು, ಮೌನ ಇವನ್ನೆಲ್ಲ ಹೇಳುವುದೇ, ವಿವರಿಸುವುದೆ ಅವರ ವಿಚಾರಧಾರೆಯ ಕೇಂದ್ರವಾಗಿ ನನಗೆ ಕಂಡಿದೆ. ಈ ಬಗೆಯ ವಿರಾಮವನ್ನು ನಮ್ಮ ಎಲ್ಲ ವಿಚಾರ, ಕ್ರಿಯೆಗಳೊಂದಿಗೇ ಇರುವುದನ್ನು ಅವರು ಹೇಳುತ್ತಾರೆ ಎನ್ನುವುದನ್ನ ಮರೆಯಲಾಗದು. There must be harmony between the living functioning in thought and the freedom from thought.

ಈ ಬಗೆಯ ನೋಡುವಿಕೆಯಿಂದ, ಅರ್ಥಮಾಡಿಕೊಳ್ಳುವಿಕೆಯಿಂದ ಉಂಟಾಗುವ ಅವಸ್ಥೆಯ ಕುರಿತು ಕೃಷ್ಣಮೂರ್ತಿ ಮಾತನಾಡಿದ್ದಾರೆ, ಅವರಲ್ಲಿಯೇ ಆಗುತ್ತಿದ್ದ ಅನುಭವದ ಬಗೆಗೆ ಡೈರಿ ಬರೆದಿಟ್ಟಿದ್ದಾರೆ. ಈ ಬಗೆಯ ಸ್ಥಿತಿಯನ್ನು ನಮ್ಮ ದೇಶದಲ್ಲಿ ಹೇಳಲಾಗುವ "ಸಮಾಧಿ" ಗೆ ಹೋಲಿಸಬಹುದೇನೊ.

ಇತರ ಧರ್ಮಗಳಿಂದ, ತತ್ವಗಳಿಂದ ಕೃಷ್ಣಮೂರ್ತಿ ಬೇರೆಯಾಗುವುದು ಅವರು ಯಾವುದೇ ಪರಂಪರೆಯ ಹುಟ್ಟುಹಾಕದೇ ಇರುವುದಕ್ಕೆ, ಒಂದು ಗುಂಪು ಬೆಳೆಯುವುದನ್ನ ಒಪ್ಪಿಕೊಳ್ಳದೇ ಇರುವುದಕ್ಕೆ ಮುಂತಾಗಿ ಎನ್ನಬಹುದು. "ನೀವೇ ಒಬ್ಬ ಗುರು" ಎಂದು ಒಬ್ಬರು ಅವರನ್ನ ಕೇಳಿದಾಗ, ಅವರು ನಿರಾಕರಿಸುತ್ತಾರೆ. ಬಹುಶಃ ಅದು ಅವರ ವಿಚಾರದಲ್ಲಿ ಸರಿಯಾಗುತ್ತದೆ. ನಮ್ಮ ಮನಸ್ಸು, ಮನಸ್ಸಿನಲ್ಲಿಯ ವ್ಯಾಪಾರಗಳು, ಅವನ್ನ ನಾವೇ ನೋಡುವುದು, ತಿಳುವಳಿಕೆ ಹೊಂದುವುದು–ಅದರಿಂದ ಸಹಜವಾಗಿಯೇ ಬಿಡುಗಡೆಗೆ ತವಕಿಸುವುದು ಅದು ಸಹಜವಾಗಿಯೇ ಸಂಭವಿಸುವುದು ಇದೆಲ್ಲ ಯಾವ ಗುರುವನ್ನು ಆಶ್ರಯಿಸಿ, ಗ್ರಂಥವನ್ನ ಪಾಲಿಸಿ, ಒಂದು ತತ್ವಶಾಸ್ತ್ರವನ್ನು ಒಪ್ಪಿಕೊಂಡು ಆಗಬೇಕಾದ್ದಲ್ಲ. ಅವರು ಹೇಳುವಂತೆ

Religion, then is something that cannot Possibly be put into words; it cannot be measured by thought.

ಇಷ್ಟೆಲ್ಲ ಹೇಳುವ ಜೆ. ಕೃಷ್ಣಮೂರ್ತಿ [ಅವರ ಮಾತುಗಳನ್ನು ಓದಿಯೇ ಅನುಭವಿಸುವುದು ಅವಶ್ಯಕ-ಅಲ್ಲಿಯೇ ಅದರ ತೀವ್ರತೆ ನಮ್ಮನ್ನ ತಟ್ಟುತ್ತದೆ] ಸಹಜವಾಗಿ ಈಕಡೆ ಮನಸ್ಸು ವಾಲಿ ಬರುವುದನ್ನೇ ಹೇಳುತ್ತಾರೆ. ಇಂತಹ ಆಸಕ್ತಿ

ಉಂಟಾಗದವರೂ ಕೃಷ್ಣಮೂರ್ತಿಯವರ ಹತ್ತಿರ ಬಂದಿದ್ದಾರೆ, ಅವರನ್ನ ಅವರು ಹಾಗೆಯೇ ಕಳಿಸುತ್ತಾರೆ. ಆದರೂ ಅವರ ಭಾಷಣಗಳಲ್ಲಿ, ಜನರೊಡನೆಯ ಸಂಭಾಷಣೆಗಳಲ್ಲಿ, ಬರಹಗಳಲ್ಲಿ ಮನಸ್ಸಿನ ಪ್ರಪಂಚವನ್ನು ನಾವೆಲ್ಲ ಅರ್ಥಮಾಡಿಕೊಳ್ಳುವ ತೀವ್ರತೆ ಬಲವತ್ತರವಾಗಿದೆ.

ಸಂಗ್ರಹವಾಗಿ ಜೆ. ಕೃಷ್ಣಮೂರ್ತಿಯುವರನ್ನ ಕಾಣುವುದಾದರೆ ಸತ್ಯವನ್ನು ಅರಿಯುವುದಕ್ಕೆ ಯಾವುದೇ "ದಾರಿ" ಎಂಬುದಿಲ್ಲ, ನಮ್ಮಲ್ಲಿನಡೆಯುವ ಏನೆಲ್ಲ ಗೊಂದಲಗಳನ್ನ ಮೌನವಾಗಿ ವೀಕ್ಷಿಸುವುದು, ವ್ಯಕ್ತಿಯ ಈ ಬದಲಾವಣೆಯೇ ನಿಜವಾದ ಬದಲಾವಣೆ, ಈ ಬದಲಾವಣೆ ಎಂದರೆ ನಮ್ಮ ಭೂತಕಾಲದಿಂದ ಬಿಡುಗಡೆಯಾಗುವುದಾಗಿದೆ, ಇದು ಯಾವುದೇ ಒತ್ತಾಯದಿಂದ ಆಗಬೇಕಾದುದಲ್ಲ ಸಾಮಾಜಿಕ ಸಂಗತಿಗಳ ಬಗೆಗೆ ಕೃಷ್ಣಮೂರ್ತಿ ಏನನ್ನೂ ಹೇಳುವುದಿಲ್ಲ, ಮನುಷ್ಯನ ಈ ಒಳಗಿನ ಬದಲಾವಣೆಯ ಕುರಿತಾಗಿ ಚಿಂತಿಸುತ್ತಾರೆ. ಈ ಬಗೆಯ ಬದಲಾವಣೆಯಿಂದ ಸಾಮಾಜಿಕ ಜೀವನ ಸಹಜವಾಗಿಯೇ ಬೆಳಕು ಕಾಣುತ್ತದೆ ಎನ್ನುವುದೇ ಅವರ ವಿಚಾರವಾಗಿರಲು ಸಾಕು. ಯಾಕೆಂದರೆ ಅವರು ನಮ್ಮ ಯಾವ ಚಟುವಟಿಕೆಯನ್ನೂ ತ್ಯಜಿಸಿ ಹೋಗಲು ಹೇಳುವುದಿಲ್ಲ.

ತುಂಬಾ ವಿಶಾಲಾರ್ಥದಲ್ಲಿ ನೋಡುವಾಗ ಭಾರತದಲ್ಲಿ ಬೆಳೆದು ಬಂದ ಪರಂಪರೆಯ ಆಧ್ಯಾತ್ಮದಿಂದ ಜೆ. ಕೃಷ್ಣಮೂರ್ತಿ ಬೇರೆ ಎನಿಸುವುದಿಲ್ಲ. ಅವರ ವಿಧಾನ ಸ್ಥಿತಪ್ರಜ್ಞತೆಯಿಂದ ಬೇರೆ ಅನಿಸುವುದಿಲ್ಲ. "ತತ್ ತ್ವಮ್‌ಅಸಿ" ಗಿಂತ ಬೇರೆ ಅನಿಸುವುದಿಲ್ಲ.

ಆದರೆ ಬೇರೆ ಇದೆ, ಅದೇ ಮನುಷ್ಯ ಸತ್ಯವನ್ನ ತಾನೇ ಕಂಡುಕೊಳ್ಳಬೇಕು, ಯಾವುದೋ ಗ್ರಂಥ ಹೇಳುತ್ತದೆಂದಾಗಲಿ, ಯಾರೋ ಋಷಿಗಳು ಹೇಳುತ್ತಾರೆಂದಾಗಲಿ ಅಲ್ಲ. ಮತ್ತು ಇದರ ಅವಶ್ಯಕತೆ, ಅನಿವಾರ್ಯತೆ ತಾನೇ ತನ್ನ ಮನಸ್ಸಿನ ಜಗತ್ತನ್ನಕಂಡಾಗ ಅನುಭವಕ್ಕೆ ಬರುತ್ತದೆ. ಹಾಗೇ ಕಂಡು, ಸಹಜವಾಗಿ ಸತ್ಯವನ್ನು ಪಡೆಯುವುದಾಗಿದೆ.

ಆದರೆ ಜೆ. ಕೃಷ್ಣಮೂರ್ತಿಯವರನ್ನು ಓದುವಾಗಲೆಲ್ಲ ನನಗೆ ಒಂದು ಸಂಗತಿ ಕಾಡುತ್ತದೆ. ಮನಸ್ಸಿನ ಸ್ಥಿತಿಯನ್ನ, ಅಂದರೆ ಒಟ್ಟಾಗಿ ನಮ್ಮ ಸದ್ಯದ ಅವಸ್ಥೆಯನ್ನ ಎದುರಿಗಿಟ್ಟು ಅದರಿಂದ ಬದಲಾವಣೆಯಾಗುವ, ಸ್ವತಂತ್ರವಾಗುವ ಅನಿವಾರ್ಯತೆಯನ್ನ ಅವರು ಹೇಳುತ್ತಾರೆ. ಆದರೆ ಅಷ್ಟೇ ಹೇಳುವುದಿಲ್ಲ, ಅವರು ಹೇಳುವ "ಮೌನವಾಗಿ ವೀಕ್ಷಿಸುವುದು" 'Understanding', "ನೋಡುವುದು" ಇದರಿಂದ

ಸತ್ಯದ ಅನುಭವವಾಗುತ್ತದೆ, ಅಂದರೆ ಮನುಷ್ಯನ ಸದ್ಯದ ಅಸ್ತಿತ್ವದ ಆಚೆ ಮತ್ತೊಂದಿದೆ, ಅದು ಸಿಗುತ್ತದೆ ಮುಂತಾಗಿ. 'through negation you have the positive action' ಎನ್ನುತ್ತಾರೆ, ಅವರ ಡೈರಿಯ ಪುಟಗಳಲ್ಲಿ ಈ ಆನಂದದ ಸ್ಥಿತಿಯ ಸುಳುಹು ನೀಡುತ್ತಾರೆ. ಅಂದರೆ ಮನಸ್ಸಿನ ಅವಸ್ಥೆ ಹೀಗೆಂದು ಬಿಚ್ಚಿಡುತ್ತ, ಅದರಿಂದಾಚೆ ಬರುವ ಸಹಜವಾದ ಅನಿವಾರ್ಯತೆ ಹೇಳುತ್ತ, ಅಲ್ಲಿಗೇ ಮುಗಿಯದೆ ಮುಂದುವರಿದು ಸಕಾರಾತ್ಮಕ ಸಂಗತಿ ಹೇಳುತ್ತಾರೆ, ಅಂದರೆ ಈ ಜಗತ್ತಿನಾಚೆಯ ವಿಶಿಷ್ಟ ಸಂಗತಿಯೊಂದಿದೆ, ಅದನ್ನ ತಲುಪುತ್ತೀರಿ ಎನ್ನುವುದನ್ನೂ ಸೂಕ್ಷ್ಮವಾಗಿ ಹೇಳುತ್ತ ಒಬ್ಬ ಗುರುವಿನ ಹಾಗೆಯೇ ಅನಿಸಿಬಿಡುತ್ತಾರೆ ಒಮ್ಮೆ.

ಆದರೂ ಇಷ್ಟುಮಾತ್ರ ನಿಜ. ಅನುಭಾವದ ಕುರಿತಾಗಿ ಜೆ. ಕೆ. ಹೇಳುವುದೆಲ್ಲ, ಪರಂಪರೆಯ ಅಧ್ಯಾತ್ಮದಲ್ಲಿ ಕ್ರಾಂತಿಯುದಾಗಿದೆ ಒಂದು, ಇನ್ನೊಂದು ಅದು ಉಪದೇಶವಾಗುವುದಿಲ್ಲ, ಒಂದು ವ್ಯವಸ್ಥೆಯಾಗುವುದಿಲ್ಲ, ಸಮಾಜದಲ್ಲಿ ಯಾವುದೇ ಬಗೆಯ ಒಡಕಿನ ಹುಟ್ಟುಹಾಕುವುದಿಲ್ಲ, "ಸಹಜತೆ" ಯನ್ನ ಹೇಳುತ್ತದೆ. ಅದಕ್ಕೆ ಅವರ ವಿಚಾರಗಳು ತೀರ ತೀರ ಗೊಂದಲಮಯ ಎನಿಸಿದರೂ, ಮತ್ತೆ ಮತ್ತೆ ಓದಬೇಕೆನಿಸುತ್ತದೆ. ●

---

## "ಹಲವರ ಕೆಲವು ಹನಿಗಳು"

-೧-

ಗೆಳತಿ,
ನೀನು ಮಾತಿಗೊಮ್ಮೆ
ಸಾಯುವ ಮಾತನಾಡುವೆ
ಕಾರಣ – ನಿನ್ನ ಪ್ರಾಣ ನಿನ್ನಲ್ಲಿದೆ
ನಾನು ಸಾಯುವ ಮಾತಾಡೆ
ಯಾಕೆಂದರೆ ನನ್ನ ಪ್ರಾಣ ನಿನ್ನಲ್ಲಿದೆ

-೨-

ಸಿಗರೇಟು ಕವನ ಮತ್ತು ನೀನು
ನನ್ನಿಂದೆಂದು ಅಗಲದ ನೆಂಟರು
ನನಗಾಗಿ ಈ ಕ್ರೂರ ವಾಸ್ತವವನ್ನು
ಎದುರಿಸುತ್ತಿರುವ ಬಂಟರು

— ಬಾಪುಗೌಡ ಶಾಡಲಗೇರಿ

# ಕಾಡು (ಕಥೆ)

●●

## ಸಿದ್ಧರಾಮ ಹೊನ್ಕಲ್

ಕಾಡು ಕಡಿವ ಕೊಡಲಿಯ
ಕಾವು
ಕಾಡಿನ ಕೊಡುಗೆ

● ಕೆ. ಎಂ. ಮು.

ಬರ್‍ರಿಯಂಪ್ಪೋsss.... ಅಣ್ಣನ ಕಡದಾಕ್ಯಾರೆಪ್ಪೋssss ವಿಕಾರ ಕೂಗು ಗಾಳಿ ಗುಂಟ ಹರಿದುಬಂದು ಚುಮುಚುಮು ಬೆಳಗಿನ ನಿದ್ದೆಗಣ್ಣಿನಲ್ಲಿದ್ದ "ಧರ್ಮದಳ್ಳಿ" ಹಟ್ಟಿಯನ್ನು ಪ್ರವೇಶಿಸಿದಾಗ ಹಟ್ಟಿಯ ಐವತ್ತು ಅರವತ್ತು ಮನೆಗಳ ಹೆಣ್ಣು ಗಂಡು ಚುಕ್ಕೋಳು ಮುದುಕರು ತದಕರಾದಿಯಾಗಿ ಎಲ್ಲರು ಯಾವುದೋ ಗೂಗಿ ಕೂಗು ಕೇಳಿ ತಟ್ಟನೇ ಕೆಟ್ಟ ಕನಸಿನಿಂದ ಭೀತರಾಗಿ ಎದ್ದಂತೆ ಗಾಭರಿಯಾಗಿ ತಮ್ಮ ತಮ್ಮ ಮನೆಗಳೆಂಬ ಗುಡಿಸಲಗಳಿಂದ ಹೊರಗೋಡಿ ಬಂದರು. ಕುರುಬರ ಕಲ್ಲಪ್ಪನ ಮಗ ಮಲ್ಲಯ್ಯ ನಸುಕಿನ್ಯಾಗ ಎದ್ದು ಹಟ್ಟಿಗೆ ಹತ್ತಿಕೊಂಡಿದ್ದ ಹೊಲದಾಗಿನ ಎತ್ತುಗಳಿಗೆ ಮೇವು ಹಾಕಲು ಹೋದವನು ತನ್ನ ಅಣ್ಣ "ಯಲ್ಲಪ್ಪ" ನ ರುಂಡ ಮುಂಡ ಕಡ್ದು ಚೆಲ್ಲಿದ್ದು ನೋಡಿ ಹಾವು ಮೆಟ್ಟಿದವನಂತೆ ಚಿಟ್ಟನೇ ಚೀರಿದ್ದ...... ಬರ್‍ರಿಯಂಪ್ಪೋsss ಅಣ್ಣನ ಕಡ್ದಾಕ್ಯಾರೆಪ್ಪೋsss

ಮುಂದಿನ ಕ್ಷಣದಲ್ಲಿ ಹಟ್ಟಿಗೆ ಹಟ್ಟಿಯೇ ಕಲ್ಲಪ್ಪನ ಹೊಲದಾಗ ಇತ್ತು. ಕಟ್ಟು ಮಸ್ತಾದ ಹರ್‍ಯಾದ "ಯಲ್ಲಪ್ಪ" ನ ರುಂಡ ಮುಂಡ ರಕ್ತಸಿಕ್ತ ವಾಗಿ ಅಲ್ಲಲ್ಲಿ ಬಿದ್ದಿದ್ದವು. ಮುಂಡದಗುಂಟ ಹರ್‍ದ ನೆತ್ತರ ನೆಲದಮ್ಯಾಗ ಹಸಿಹಸಿ ಕಾಣ್ತಿತ್ತು. ಕೆಟ್ಟದಾಗಿ ಕೂಗಿದವನು ತನ್ನ ಮೈದುನ ಮಲ್ಲಯ್ಯ ಅಂದಮ್ಯಾಗ ಕೊಲಿ ಆದವನು ತನ್ನ ಗಂಡ ಯಲ್ಲಪ್ಪನೇ ಅನ್ನೋದು ಖಾತ್ರಿ ಆಗಿ ಎದಿ ಒಡ್ದು ಹ್ವಾದ ಮಲ್ಲವ್ವ "ನಾ ಹೆಂಗ್ ಮಾಡ್ಲೆಯವ್ವಾ" "ಈ ಕೂಸುಗಳಿಗೆ ಇನ್ನ್ಯಾರು ದಿಕ್ಕೆಯವ್ವಾ" ಎಂದು ಬೋರಾಡಿ ಅಳುತ್ತಲೇ ಬಂದು ಸತ್ತ ಯಲ್ಲಪ್ಪನ

ಕಾಲಿನಮ್ಯಾಗಬಿದ್ದು ಹಾಡಾಡಿ ಅಳ್ಳಾಕ ಹತ್ತಿದಳು. ಅವ್ವ ಅಳದ ನೋಡಿದ ಯಾಡಮಕ್ಕು ಕೂಡಾ "ಯವ್ವೊ" ಎಂದು ಅಳಲಾಕ ಹತ್ತಿದವು. ಹೆಣದಸುತ್ತ ಸೇರಿದ ಸಂಬಂಧಿಗಳಿಗೆಲ್ಲಾ ಭಯ ಆತಂಕ.

ಹಟ್ಟಿ ತುಂಬಾ ಬ್ಯಾಟ್ರಿ ಹಿಡ್ಕಂಡು ಹುಡುಕಾಡಿದ್ರು ನಾಲ್ಕಕ್ಷರ ಕಲ್ತವರು ಒಬ್ಬರು ಸಿಗತಿದ್ದಿಲ್ಲ. ಕಡ್ದು ಹಾಕಿದ ಹೆಣದಮ್ಯಾಲ ಬಿದ್ದು ಅಳಬಾರದು. ಇದು ಖೂನಿಕೇಸು ಅಂತ ತಿಳಿಸಿ ಹೇಳಬೇಕಾದ ಹಟ್ಟಿಯ ಹಿರೀಕ ಯಜಮಾನ ಬೀರಪ್ಪ ರಾತ್ರಿ ಗಡದ್ದಾಗಿ ಕುಡ್ದು ಮಲಗಿದವನಿಗೆ ಇನ್ನು ನಿಷೆ ಇಳ್ದಿದಿಲ್ಲಾ. ಹಂಗಾಗಿ ಅವ ಎದ್ದು ಬರೋತಾನ್ಕ "ಯಲ್ಲಪ್ಪ" ನ ಖೂನಿಆದ ಹೆಣದಮ್ಯಾಲ ಇಡೀ ಹಟ್ಟಿಯ ಬೀಗರು ಬಿಜ್ಜರು, ಬಿದ್ದು ಬಿದ್ದು ಅಳ್ತಿದ್ದರು. ತಂದಿ ಮುಂದುಕ ಕಲ್ಲಪ್ಪ; ಅವ್ವ ಅಮರವ್ವ; ಹೇಣ್ತಿ ಮಲ್ಲವ್ವ ತಮ್ಮ ಮಲ್ಲಯ್ಯನ ಅಳು ನೋಡಿದರ ಆ ಹಾರ್‍ಯಾಣ ದನ ಗಿಡಗಂಟಿಗಳು ಕೂಡಾ ಕಣ್ಣೀರು ಹಾಕಿದಂಗೆ ಅನಸತಿದ್ದವು.

ಐವತ್ತು ಅರವತ್ತು ಗುಡಿಸಲುಗಳಿಂದ ತುಂಬಿರುವ "ಧರ್ಮದಳ್ಳಿ" ಹಟ್ಟಿ ಯಲ್ಲಿ ವಾಸಿಸುವ ನೂರಾರು ಜನಗಳಲ್ಲಿ ದುಡಿದುಣ್ಣುವ ಬಡವರೇ ಜಾಸ್ತಿ. ಬೀಗರು-ಬಿಜ್ಜರು ಹಿಂಗ ಒಬ್ಬರಿಗೊಬ್ಬರು ಕೊಟ್ಟುಕೊಂಡು ಇಡೀ ಹಟ್ಟಿಯೇ ಒಂದು ರಕ್ತ ಸಂಬಂಧದ ವ್ಯಾಲ ನಿಂತಿತ್ತು. ಒಬ್ಬರಿಗೊಬ್ಬರು ಮಾವ-ಯಣ್ಣಾ ಅಳ್ಳಾ ಆಗಿ ಒಂದು ಊರು ಹಟ್ಟಿ ಅನ್ನಿಸಿಕೊಳ್ಳೊದಕ್ಕಿಂತ ಒಂದು ದೊಡ್ಡ ಅವಿ ಭಕ್ತ ಕುಟುಂಬ ಅನ್ನೊಂಗ ಇತ್ತು. ಆದ್ರ ತಲಾಟಿ ಕುಲಕರ್ಣಿ ಅನ್ನಿಸಿಕೊಳ್ಳುವ ವಿ. ಎ. ಈ ಹಟ್ಟಿಗೊಂದು ಕಾಯಂ ಹೆಸರು ಖೂನಕ್ಕ ಇರಲಿ ಅಂತ ತನ್ನ ರಜಿಸ್ಟ್ರಿಯಾಗ "ಧರ್ಮದಳ್ಳಿ" ಅಂತ ಬರ್ಕೊಂಡುಬಿಟ್ಟಿದ್ದ. ಅಂಗಾಗಿ ಸರಕಾರದವ್ರ ಬಾಯ್ಯಾಗ ಅದು "ಧರ್ಮದಳ್ಳಿ" ಆಗಿತ್ತು ಹೊರ್ತು; ಆ ಊರಿಗೇನು ಧರ್ಮದಳ್ಳಿ ಅನ್ನೋ ಹೆಸರಿನ ಬೋರ್ಡಾಗಲಿ; ಬೋರ್ಡಹಾಕಲು ರಸ್ತೆಯಾಗಲಿ ಇರಲಿಲ್ಲ. ಅಂದಮ್ಯಾಗ ಆ ಬೋರ್ಡು ನೋಡಿ ನಿಂದ್ರಸಲಿಕ್ಕಾಗಲಿ ಅಥವಾ ಹಂಗೆ ರೈಟ ಅಂತ ಹೊಡ್ಕೊಂಡು ಹೋಗೊದಕ್ಕ ಬಸ್ಸು ಆಗಲಿ ಓಡಾಡತ್ತಿದ್ದಿಲ್ಲ. ಅಷ್ಟೆಯಾಕ, ಇನ್ನೂ ದೇಶದ ತುಂಬ ಭಾಗ್ಯಜ್ಯೋತಿ ದೀಪ ಬಂದ್ರು ಈ ಹಟ್ಟಿಗೆ ಇನ್ನು ಭಾಗ್ಯನು ಬಂದಿದಿಲ್ಲ. ಜ್ಯೋತಿನು ಬಂದಿರಲಿಲ್ಲ. ದೊಡ್ಡ ಊರಿಂದ ಯಾಡ ಕೂಗಳತಿ ಅಥವಾ ಯಾಡ ಸೌನಂಬರ ಬೀಡಿ ಸೇದೋ ಹೊತ್ತಿನ ನಡಿಗಿ ನಡದ್ರ ಈ ಧರ್ಮದಳ್ಳಿ ಬರ್ತಿತ್ತಾದರು ಗುಡ್ಡದ ಮರಿಗಿ ಇದ್ದದ್ದರಿಂದ ಒಂದ ನಮೂನಿ ಕಾಡಿನ್ಯಾಗ ಇದ್ದಂಗಇತ್ತು.

"ಯಾ ಪಾಪಿ ಕಡ್ದು ಹಾಕಿದ್ನೊ ಯಪ್ಪಾ
ನನಗಂಡ ಅಂತದ್ದು ಏನು ತಪ್ಪ ಮಾಡಿದ್ನೊ ಯಪ್ಪಾ
ಚೊಲತಿನ್ನಾಗ ದುಡ್ಕಂಡು ತಿಂದದ್ದು ದೇವರಿಗೆ ಸರಿಬರಲಿಲ್ಲೊ ಯಪ್ಪಾ
ಆ ದೇವ್ರಿಗೆ ಕಣ್ಣಿಲ್ಲೊ ಯಪ್ಪಾ
ಮುಂಜಾನಿಂದ ಚಿಂತ್ಯಾನ ಹೊಲ ಹೊಲ ಅಂತಿದ್ನೊ ಯಪ್ಪಾ;
ಮನ್ಯಾಗ ಮಕ್ಕಂಡಿದ್ದರ ಹಿಂಗ ಆಗತಿತ್ತೇನೋ ಯಪ್ಪಾ
ನಾ ಹೆಂಗ ಮಾಡ್ಲೆ ಯಪ್ಪಾ
ನನಮಕ್ಕಳು ಪರದೇಶಿ ಆದುವೆ ಯಪ್ಪಾ

ಮಲ್ಲವ್ವನ ಅಳುವಿಗೆ ಅಂತ್ಯವಿರಲಿಲ್ಲ. ಇಪ್ಪತ್ತೆರಡು – ಇಪ್ಪತಮೂರು ವಯಸ್ಸಿನ ಮಲ್ಲವ್ವ ಯಾಡ ಮಕ್ಕಳೊಂದಿಗೆ ಹೆಣದ ಕಾಲಮ್ಯಾಗ ಉರಳಾಡಿ ಅಳ್ತಿದ್ದರೆ ಸುತ್ತಲಿನವರಿಗೆ ಸಮಾಧಾನ ಹೆಂಗ ಮಾಡಬೇಕೆಂದು ತಿಳಿಯದೇ ಕಣ್ಣೀರು ಹಾಕುತ್ತಿದ್ದರು. ದಿಗ್ಮೂಢರಾಗಿದ್ದರು.

ಗಂಡನ ಕೌದಿ ಮುಸುಕಿಡಿದು ಜಗ್ಗಿ ಸಣ್ಣ ಮಲ್ಲವ್ವ ಗಂಡನನ್ನು ಉದ್ದೇಶಿಸಿ "ಯಲ್ಲಪ್ಪನ್ನ ಕಡ್ಡು ಹಾಕ್ಯಾರಂತ ಹಟ್ಟಿಗೇ ಹಟ್ಟಿನೇ ಅಳ್ಳಾಕ ಹತ್ಯಾದ. ನೀ ನೋಡಿದರ ಊರ ಹಿರ್ಯಾ ಆಗಿ ಹಿಂಗ ಕುಡ್ದು ಬಿದ್ದಿದಿ." ಎಂದು ಸಿಟ್ಟುಮಾಡಿ ಕೊಂಡು ಎಬ್ಬಿಸಿದಾಗ, ಗಾಭರಿಯಾದ ಬೀರಪ್ಪ "ಏನಂದಿ, ನಮ್ಮ ಯಲ್ಲ್ಯಾನ ಕೋಲಿ ಆಗ್ಯಾದ. "ಯಪ್ಪಾ, ದೇವರೆ, ಹಯ್ಯಾಳಿ. ನೀನೇಪ್ಪೊ ಯಪ್ಪಾ. ನಮ್ಮ ನ್ನೆಲ್ಲಾ ಕಾಪಾಡಪ್ಪೊ" ಎಂದು ಸ್ವಗತದಲ್ಲಿ ಹೇಳಿಕೊಂಡವನಿಗೆ ಸರ್ರನೇ ರಾತ್ರಿ ಕುಡ್ದ ಹೆಂಡದ ನೀಷಾನೇ ಇಳಿದು ಹೋಗಿತ್ತು. ಆದರು "ಖರೇ ಹೇಳ್ತಿದೇನೇ" ಎಂದು ಇನ್ನೊಮ್ಮೆ ಹೇಣ್ತಿ ಸಣ್ಣ ಮಲ್ಲವ್ವನನ್ನು ವಿಚಾರಿಸಿ ಖಚಿತ ಪಡಿಸಿ ಕೊಂಡವನೇ ಅವಸರದಲ್ಲಿ ಗೂಟಕ್ಕೆ ಸಿಕ್ಕಿಸಿದ್ದ ಬಾರಾಕಸಿ ಅಂಗಿ ಸಿಗಿಸಿಕೊಂಡು ಕಸಿ ಕಟ್ಟಿಕೊಳ್ಳುತ್ತಲೇ ಕಲ್ಲಪ್ಪನ ಹೊಲದಕಡೆ ದಾಪುಗಾಲು ಹಾಕಿದ.

ಐವತ್ತರ ಅಂಚಿನಲ್ಲಿದ್ದ "ಭೀರಪ್ಪ" ನೆಂದರೆ ಹಟ್ಟಿಯ ಎಲ್ಲರಿಗೂ ತಮ್ಮ ಯಜಮಾನ ಎಂಬ ಗೌರವ. ಪಕ್ಕದ ದೊಡ್ಡ–ಊರಿನ ಗೌಡ್ರು–ಕುಲ್ಕಣ್ಣೀರ ಸಮೀಪ ಕುಂತು ಬರುತ್ತಾನೆಂಬುದಕ್ಕೊ ಅಥವಾ ಆವಾಗಾವಾಗ ಓಟಿಗೆ ಬಂದವ ರೆಲ್ಲಾ ಮೊದಲು ಆತನ ಮನಿ ಹತ್ತಿರ ಬರುತ್ತಾರೆಂಬುದಕ್ಕೊ ಎಂಬುದರ ಜೊತೆಗೆ ದೊಡ್ಡ ಊರಿಗೆ ಹೋಗಿ ಸಾರಾಯಿ ಕುಡ್ದು ಬರೋಷ್ಟು ಅವನು ಸಾವ್ಕಾರ ಎಂಬುದಕ್ಕೊ ಒಟ್ಟಿನಲ್ಲಿ ಆ ಹಟ್ಟಿಯ ಅವಿರೋಧ ಯಜಮಾನನಾಗಿ ಬೀರಪ್ಪನಿದ್ದ.

ಬೀರಪ್ಪನಿಗೂ ಅಷ್ಟೆ. ತಮ್ಮ ಹಟ್ಟಿ ಜನಗಳ ಮಧ್ಯೆ ಯಾವ ಜಗಳ-ಜೂಟಿ ಬರಬಾರದೆಂದು ಅವರ ಮನ್ಯಾನ ಹೆಣ್ಣು ಈ ಮನಿಗಿ ಕೊಡಿಸೋದು. ಈ ಮನ್ಯಾನ ಹೆಣ್ಣು ಆ ಮನಿಗಿ ಕೊಡಿಸೋದು, ಹಿಂಗ ಮಾಡಿ ಒಟ್ಟು ಹಟ್ಟಿಗೆ ಹಟ್ಟಿಯೇ ರಕ್ತ ಸಂಬಂದಿಗಳಾಗಿ ಅದೊಂದು ಹೊರ ಜಗತ್ತಿನ ಕೊಡುಕೊಳ್ಳು ವಿಕೆಯು ಯಾವ ಸಂಪರ್ಕವೇ ಬೇಕಿಲ್ಲದ ಸ್ವತಂತ್ರ ಪರಪಂಚ ಆಗಿತ್ತು. ವಾರ ಕೊಂದು ಸಲ ಸಂತಿಗಿ ಹೋಗಿ ಹೆಚ್ಚಾದ ಕಾಳುಕಡಿಮಾರಿ ಒಂದಿಟು ಬೆಲ್ಲ, ಟೆಂಗಿನ ಕಾಯಿ, ಉಪ್ಪು, ಕಡ್ಡಬ್ಬಿ, ಗಂಡಸರಿಗೆ ಸೌನಂಬರ ಬೀಡಿ; ಹೆಂಗಸರಿಗೆ ನಾಶಿ ತರುವಷ್ಟರ ಮಟ್ಟಿಗೆ ಇತ್ತೀಚಿನ ವರ್ಷಗಳಲ್ಲಿ ಆ ಹಟ್ಟಿ ಸುಧಾರಿಸಿತ್ತು.

ಓಟು ಹಾಕಿಸಿಕೊಂಡವರಲ್ಲಿ ಯಾರೋ (ಮಾಸ್ತರನ ಪಾಲಿನ) ಪುಣ್ಯಾತ್ಮರು ಕಾಳ್ಜಿ ಮಾಡಿ ಅಲ್ಲಿ ಒಂದು ಸಾಲಿ ಚಾಲು ಮಾಡಿಸಿದ್ದರು. ಯಾ ಹುಡುಗರು ಸಾಲಿಕಡಿ ತಲಿಮಾಡಿ ಮಕ್ಕಂತಿದ್ದಿಲ್ಲ. ಇಂಥಾ ಸಾಲಿಗಾಗಿ ಹುಡುಕ್ಯಾಡುತ್ತಿದ್ದ ಸಾವಿರಾರು ಮಾಸ್ತರಗಳಲ್ಲಿ ಪಕ್ಕದೂರಿನ "ಧರ್ಮಣ್ಣ" ಮಾಸ್ತರನ ದೈವ ಖುಲಾಯಿಸಿ ಈ ಸಾಲಿಗಿ ಮಾಸ್ತರ ಆಗಿ ಬಂದು ತಮ್ಮ ಹೊಲಮನಿಕಡಿ ನಿಗರಾಣಿ ಹೆಚ್ಚಿಸಿಕೊಂಡು ಸಾಲಿಗಿಷ್ಟು ಸರ್ಕಾರಿ ಮುಳ್ಳು ಬಡದು ನೆಮ್ಮದಿಯಾಗಿ ಇದ್ದ.

ಇಂಥಾ ಭೂತ-ವರ್ತಮಾನ ಹೊಂದಿದ ಆ ಹಟ್ಟಿಯಲ್ಲಿ ಈಗ ಶಾಂತ ವಾಗಿದ್ದ ಜೇನುಗೂಡನ್ನು ಕೆದಕುವಂತೆ "ಯಲ್ಲಪ್ಪ" ನ ಕೊಲಿ ನಡ್ದು ಹೋಗಿತ್ತು. ಹೆಣದ ಸುತ್ತ ಸೇರಿದ್ದ ಹಟ್ಟಿ ಮಂದಿ ದೂರದಿಂದ "ಬೀರಪ್ಪ" ಬರುವದನ್ನು ಕಂಡು "ಬೀರಪ್ಪಪ್ಪ ಬಂದ". "ಬೀರಪ್ಪಣ್ಣ ಬಂದ" ಎಂದು ಗುಸುಗುಸು-ಪಿಸು ಪಿಸು ಮಾತಾಡಿಕೊಂಡು ಗೌರವದಿಂದ ಸರ್ದು ಹೆಣದಕಡಿ ದಾರಿ ಮಾಡಿಕೊಟ್ರು.

"ಬೀರಪ್ಪ" ನನ್ನು ನೋಡಿದ್ದೆತಡಾ ಯಲ್ಲಪ್ಪನ ಹೇಣ್ತಿ ಮಲ್ಲವ್ವ ಓಡೋಡಿ ಬಂದು ಬೀರಪ್ಪನ ಕಾಲಿನಮ್ಯಾಗಬಿದ್ದು "ಮಾವಾ, ನಾ ಇನ್ನ ಹೆಂಗ ಬದಕಲೋ ಮಾವಾ, ಯಾ ಪಾಪದವನು ನನ್ನ ಗಂಡನ್ನ ಜೀವ ತಿಂದ್ನೊ-ಮಾವಾ, ಅವ್ನ ಉಡದಾರ ಹರಿಲೋ ಮಾವಾ; ನಾ ಎಷ್ಟು ಬಡ್ಕೊಂಡ್ರು ಕೇಳಲ್ಲಿಲ್ಲೊ ಮಾವಾ, ಹೊಲದಾಗೇ ಮಕ್ಕಂತಿದ್ದನೋ ಮಾವಾ, ನನ್ನ ಪರದೇಶಿ ಮಾಡಿಹ್ವಾದ್ನೊ ಮಾವಾ" ಎಂದು ಮುಖಕ್ಕೆ ಸೆರಗು ಹಿಡ್ದು ಅಳತೊಡಗಿದಳು.

"ಇರ್ಲೆವ್ವಾ ಯವ್ವಾ, ಸಮಾಧಾನ ಮಾಡ್ಕಬೇಕು. ಪಾಲಿಗೆ ಬಂದದ್ದು ತಪ್ತಾದೇನವ್ವ. ಅವ್ವ ಶಟಿಗೆಪ್ಪ ಬರದದ್ದು ತಪ್ಪಂಗಿಲ್ಲವಾ. ಇರಲಿ. ತಾಳಬೇಕು", ಎಂದು ಕಾಲುಬಿಡಿಸಿಕೊಂಡು ಬಂದು ಹೆಣದ ಭೀಕರತೆಯನ್ನು ನೋಡಿ "ಎಂಥಾ

ಪಾಪದ ಸೂಳೆಮಕ್ಕಳಪ್ಪಾ, ಹೆಂಗ ಕಡದಾರ "ಕುರಿ ಕಡದಾಂಗ" ಎಂದು ಕಣ್ಣಿನ ತುದಿಯನ್ನು ಧೋತುರದ ಚುಂಗಿನಿಂದ ಒರೆಸಿಕೊಂಡು ಮುಂದಿನ ಕೆಲಸದ ಕಡೆ ಗಮನ ಕೊಡಲು ಕ್ಷಣ ಕುಂತು ಸೌನಂಬರ ಬೀಡಿ ಹಚ್ಚಿಕೊಂಡು ಚಿಂತಾಪರನಾದ. "ಹಿಂಗ ಹೆಂಗ್ಯಾತು ! ಅನ್ನೋದು ಬೀರಪ್ಪನ ಯೋಚನೆಯಾಗಿತ್ತು."

ಅತ್ತು ಅತ್ತು ಸುಸ್ತಾದ ಮುಂದುಕ ಕಲ್ಲಪ್ಪ, ಅವ್ವ ಅಮರವ್ವ; ತಮ್ಮ ಮಲ್ಲಯ್ಯ ಹಿಂಗ ಹಟ್ಟಿಗೆ ಹಟ್ಟಿಯೇ ಮುಂದೇನು ಎಂದು ತೋಚದೆ ಭೀತರಾಗಿ ಕುಂತಿದ್ದರು ಇಲ್ಲಾ ಅಳುತ್ತಿದ್ದರು. "ಯಣ್ಣಾ ನೀನೇ ಒಂದು ದಾರಿ ತೋರಸಪ್ಪೊ" ಎಂದು ಮುಂದುಕ ಕಲ್ಲಪ್ಪ ಬಿಕ್ಕಿ ಬಿಕ್ಕಿ ಅಳುತ್ತಿದ್ದ.

"ನಾ ಒಬ್ನೆ, ಇನ್ನು ವ್ಯಾಲ ಹೊಲಮನಿ ಹೆಂಗ ನೋಡ್ಕಬೇಕಪ್ಪೊ ಯಣ್ಣಾ, ನಿನಗ ಹೆಂಗ ಅಯ್ತಲಪ್ಪೊ ಯಣ್ಣಾsss ಎಂದು" ತಮ್ಮ ಮಲ್ಲಯ್ಯ ಒಡಲಾಳದ ಸಂಕಟ ತೋಡಿಕೊಳ್ಳುತ್ತಿದ್ದ. ಅಮರವ್ವನಿಗಂತು ತನ್ನ ಕರುಳ ಕುಡಿ ಯನ್ನು ಈ ರೀತಿ ಕತ್ತರಿಸಿ ಹಾಕಿದ್ದನ್ನು ನೋಡಿ ಎದಿಒಡ್ದು; ಅಳು ಬತ್ತಿ ಹೋಗಿತ್ತು. ಕುಂತಲ್ಲೆ ವ್ಯಾಲ ಕೈಮಾಡಿ ತಲಿಹಾಕಿ ಹಾಕಿ ಅಳ್ತಿದ್ದಳು. ಹಟ್ಟಿಯ ಹೆಣ್ಣೆಂಬ ಹೆಣ್ಣು ಗಂಡೆಂಬ ಗಂಡು ಕೂಸು ಕುನ್ನಿ ಎಲ್ಲಾ ಗೋಳೋ ಎಂದು ಅಳತೊಡಗಿತ್ತು. ಇಷ್ಟೊತ್ತಿಗೆ ಸೂರ್ಯ ನೆತ್ತಿವ್ಯಾಲ ಬಂದು ಸುಡುತ್ತಿದ್ದ. ಹೆಣದವ್ಯಾಲ ನೊಣಗಳು ಗುಂಯ್ ಎಂದು ಹಾರಾಡ್ತಿದ್ದವು. ಗೋಳೋ ಎಂಬ ಅಳುವಿನ ಮಧ್ಯ ಕಾಡಿನ ಗಿಡಗಿಡದ ಜೀ ಗುಟ್ಟುವ ಹುಳ ಹುಪ್ಪಟೇಗಳ ಧ್ವನಿ ಕರಗಿ ಹೋಗಿತ್ತು. ಹಟ್ಯಾನ ಮಂದೆಲ್ಲಾ ಹೊಲದಾಗ ಸೇರಿದ್ದು ನೋಡಿ ಹಟ್ಯಾನ ನಾಯಿಗಳು ಕೂಡಾ ಗಾಭರಿಯಾಗಿ ಆಕಾಶಕ್ಕೆ ಮುಖಮಾಡಿ ಕುಂಯೋ ಎಂದು ರೋಧಿಸುತ್ತಿದ್ದವು.

ಗಂಡಾ ಹೇಣ್ತಿಜಗಳ, ಕೊಡುಕೊಳ್ಳುನ್ಯಾಯ, ಹೊಲಮನಿ ಜಗಳ ಇತ್ಯಾದಿ ಚಿಕ್ಕ ಪುಟ್ಟದ್ದನ್ನೆಲ್ಲಾ ಬಗೆಹರಿಸಿ ಹಟ್ಟಿಗೆ ಹಟ್ಟಿಯನ್ನೆ ಶಾಂತಿಯಿಂದ ಇರಿಸಿದ್ದ ತಾನು ಈಗ ಏನು ? ಮಾಡಬೇಕೆಂಬುದನ್ನು ಬೀರಪ್ಪಗ ಒಂದು ದೊಡ್ಡ ಸವಾಲಾಗು ವಂತೆ ಯಲ್ಲಪ್ಪನ ರುಂಡ-ಮುಂಡ ಕಾಣಲಾಕ ಹತ್ತಿದ್ದವು. ಹಟ್ಟಿಯ ಸುತ್ತ ಮುತ್ತಲಿನ ಸೀಮೆ ಭೂಮಿಯಲ್ಲಾ ಹಟ್ಟಿಯವರಿಗೆ ಸೇರಿತ್ತು. ಕುರಿ-ಕೋಳಿ ಸಾಕಿಕೊಂಡು ಸಾಕಷ್ಟು ದುಡದು ಸಾಕಷ್ಟು ಉಂಡು, ಹೊರ ಪ್ರಪಂಚದ ಬಗ್ಗೆ ತಲಿ ಕೆಡಿಸಿಕೊಳ್ಳಲಾರ್ದೆ ಆರಾಮಿದ್ರು. ಆದ್ರ, ಇದು ಈಗ ಹಿಂಗ ಹೆಂಗ ! ಆಯ್ತು. ಬೀರಪ್ಪನ ಚಿಂತಿಗಿ ಇದು ಹುಳುವಿನಂತೆ ಕೊರಿಲಾಕ ಹತ್ತಿತ್ತು. ಬೀಡಿ ವ್ಯಾಗ ಬೀಡಿ ಸೇದಿ ಸೌನಂಬರದ ಒಂದು ಕಟ್ಟ ಕಲಾಸ ಆದವು.

"ನೋಡ್ರೆಪ್ಪಾ, ಆದದ್ದು ಅಂತು ಅನಾಹುತ ಆಗಿ ಹೋಗ್ಯಾದ. ಈಗ ನಾವು ಅತ್ರೂನು ನಮ್ಮ "ಯಲ್ಲ" ಬದುಕಂಗಿಲ್ಲ; ಕರದ್ರೂನು ಬದಕಂಗಿಲ್ಲ. ನಮ್ಮ ಹಟ್ಯಾಗ ಇಂಥದ್ದು ಹಿಂದ್ಕೂನು ಆಗಿದ್ದಿಲ್ಲ. ಮುಂದ್ಕೂ ಆಗಬಾರ್ದು ಅಂತ ನಾ ಒಂದು ಈಚಾರಕ್ಕ ಬಂದಿನಿ. ನೋಡು ಮಲ್ಲವ್ವ, ನೀ ಈಗ ಸ್ವಲ್ಪ ಸಮಧಾನ ಮಾಡ್ಕೊಳವ್ವಾ. ನಾವು ಎಲ್ಲಾ ಈವೆಲ್ಲಾ. ಮಕ್ಕಳಅವ ಸಣ್ಣವು. ಅವ್ಕರ ಮಾರೇರ ನೋಡು. ನಿನ್ನಗಂಡ ಚೋಲೊತಿನ್ಯಾಗ ದುಡ್ದು ಹೌದ ಅನಿಸಿಗೆಂಡು ಭಾಳ ಶಾಣ್ಯಾತನದಿಂದ ಸಂಸಾರ ಮಾಡತಿದ್ದ ಖರೆ. ನಮಗೆಲ್ಲಾ ಭಾಳ ಹಿಗ್ಗಿತ್ತು. ಏನು ? ಮಾಡದು; ಅವ್ನ ಆಯುಷ್ಯ ಅಷ್ಟೆ ಬರ್ದು ಕಳಿಸ್ಯಾಳ ಕಾಣಸ್ತದ ಶೆಟಿಗೆವ್ವ. ನೋಡು ಕಲ್ಲಪ್ಪಣ್ಣ, ನೀ ಅಂತು ಮುಂದುಕ ಮನುಷ್ಯ. ಮಗ ಹ್ವಾದದ್ದು ಸಂಕಟ ಆಗ್ತದ. ಅಕ್ಕ ಅಮರವ್ವನ್ ನೋಡು ಮುಂಜಾನಿಂದು ಅತ್ತು ಅತ್ತು ಹೆಂಗ ಆಗ್ಯಾಳ. ಆ ಪಾರ ಮಲ್ಲಯ್ಯನ ನೋಡು, ಅಣ್ಣ ಹ್ವಾದಂತ ಎದಿ ಒಡ್ದು ಬಿಟ್ಟಾದ. ಹಿಂಗ ಆದರ ಹೆಂಗ ? ಎಲ್ಲರು ಮೊದ್ಲು ಸಮಾಧಾನ ಆಗ್ರಿ. ಹ್ವಾದದ್ದು ಅಂತು ಬರೋದಿಲ್ಲ. ಈಗ ಮುಂದಿದ್ದ ಈಚಾರ ಮಾಡಮು" ಎಂದಾಗ ಹಟ್ಟಿ ಹಿರಿಯನ ಮಾತಿಗೆ ಎಲ್ಲರು ಹೌದೆಂದು ತಲಿಹಾಕಿ ಸುಮ್ನ ಪಿಳಿಪಿಳಿ ಕಣ್ಣ ಬಿಟಗಂತ ಕುಂತರು.

"ಇದನ್ನ ಯಾರು ? ಮಾಡ್ಯಾರ, ಯಾಕ ? ಮಾಡ್ಯಾರ ಅಂತ ತಿಪ್ಪಿ ಕೆದರಿಕೆಂತ ಕುಂತರ ನಮ್ಮ ನಮ್ಮ ಮನಿಗೋಳೆ ಹಾಳಾಗಿ ನಾವೆಲ್ಲಾ ನಗ್ಗೇಡಿ ಆಗ್ತೇವಿ. ಅವನು ಇಷ್ಟ ಪಡದು ಬಂದಿದ್ದ. ಹೋಯ್ತು. ಯಲ್ಲನಂಥಾ ಸಂಭಾವಿತ ಮನುಷ್ಯಾಗ ಇಂಥ ಸಾವು ಬರಬಾರದಿತ್ತು. ಬಂದಾದ ,ಅಂದಮ್ಯಾಗ ನಾವು ಈಗ ತಾಳಬೇಕು. ಪೋಲಿಸು ಕಚೇರಿ ಅಂತ ಹ್ವಾದರ ನಾವು ಉಳೆಂಗಿಲ್ಲ. ಆಟಾದರು ಸತ್ತವನು ಹಿಂದಕಂತು ಬರದಿಲ್ಲ. ಅದ್ಕ ಅದೆಲ್ಲಾ ಏನು ? ಬ್ಯಾಡೇ ಬ್ಯಾಡ. ನಾವು ಹಟ್ಟಿಮಂದಿ ಅಣ್ಣ-ತಮ್ಮ ಬೀಗರಾಗಿ ಈಸುಡಿನ ಬಂದಿವಿ. ಮುಂದ್ಕು ಹಂಗೆ ಇರಮು. ಅದ್ಕ ಹೆಣ ಮಣ್ಣಮಾಡಿ ಸುಮ್ನ ಮುಂದ್ನೋಡಿ ದುಡಕಂಡು ತಿನಮುರಿ" ಎಂದು ಹೇಳಿ ಇದುಕೊನೆ ಮಾತು ಎಂಬಂತೆ ಬಾಯಲ್ಲಿಯ ಬೀಡಿ ಒಗೆದು ಎದ್ದು ನಿಂತ. ಹಟ್ಟಿಯ ಜನಗಳಿಗೆಲ್ಲಾ ಇದು "ಬೀರಪ್ಪಪ್ಪ" ಹೇಳ್ಯಾನಂದಮ್ಯಾಲ ಆಯ್ತು. ನಾವೇನು ಆತನಿಗಿಂತ ಶಾಣ್ಯಾರೇನಪ" ಎಂದು ಮಾತಾಡಿಕೊಳ್ಳುತ್ತಲೇ "ಮಣ್ಣು" ಮಾಡಲು ಸಿದ್ಧತೆಗೆ ತೊಡಗಿದರು.

"ನಾ ಹೆಂಗ್ ಮಾಡ್ಲೆಯವ್ವಾ, ಮನ್ಯಾಗ ಮಕ್ಕಂಡಿದ್ದರ ನನ್ನ ಗಂಡಗ ಈ ಸಾವು ಬರ್ತಿದ್ದಿಲ್ಲೆಯುವ್ವಾ"sss ಎಂದು ಮಲ್ಲವ್ವನ ಅಳು ಆ ಹಟ್ಟಿಯ ಗುಡಿ

ಸಲು ಗುಡಿಸಿಲಿಗೂ ಬಡಿದು ಆ ಅರಣ್ಯದಲ್ಲಿ ಅರಣ್ಯರೋಧನವಾಗಿ ಸಾಗೇ ಇತ್ತು. "ನನ್ನ ಮಕ್ಕಳು ಪರದೇಶಿ ಆದುವೇ ಯವ್ವಾ, ಮುಂದೇನು ಮಾಡ್ಲೆಯವ್ವಾsss…ಕ್ಕೆ ಉತ್ತರವನ್ನು ಸ್ವತಂತ್ರ ಭಾರತದ ನೆತ್ತಿಮ್ಯಾಲ ಉರಿತಿದ್ದ ಸೂರ್ಯನಿಗೂ ಕೊಡಲು ತೋಚದೆ ಯಲ್ಲಪ್ಪನ ಹೆಣ ಮಣ್ಣಾಗುವಾಗ ಸಾಕ್ಷಿ ಆಗಿ ಆಕಾಶದಾಗೇ ತಣ್ಣಗಾಗುತ್ತ ಪಶ್ಚಿಮ ಬೆಟ್ಟಗಳ ಕಡೆ ಹೊರಟಿದ್ದ.

ಮುಂದ ಧರ್ಮದಳ್ಳಿ ಅನ್ನೋ ಆ ಹಟ್ಟಿಯಲ್ಲಿ ಆಗಾಗ ಇಂಥ ಘಟನೆಗಳು ನಡೆಯುತೊಡಗಿದವು. ಸೂರ್ಯ ಸಾಕ್ಷಿ ಇರತ್ತಿದ್ದ. ಬೀರಪ್ಪಪ್ಪ ನ್ಯಾಯ ಹೇಳತಿದ್ದ. ಕಾಲ ಕೆಟ್ಟು ಹ್ವಾದ್ವು. ನಮ್ಮ ಮಂದಿ ಸಂತಿ ಪ್ಯಾಟಿಗಿ ತಿರುಗಾಡಿ ಪಟ್ಟಣದವರಂಗ ಆದ್ರು ಅಂತ ಬ್ಯಾಸತ್ತ ಬೀರಪ್ಪಜ್ಜ ಈಗ ನಿಟ್ಟುಸಿರು ಬಿಡುತ್ತಾನಂತೆ. ●

---

# ಎರಡು ವಚನಗಳು

–೧–

ಶಿಲುಬೆಗೇರಿದವರೆಲ್ಲರೂ ಏಸುವಿನಂತಾಗುವರೇನಯ್ಯ ?
ಮನೆಬಿಟ್ಟು ಹೋದವರೆಲ್ಲರೂ ಬುದ್ಧನಂತಾಗುವರೇನಯ್ಯ ?
ವಿಷ ಕುಡಿದವರೆಲ್ಲರೂ ಸಾಕ್ರೆಟೀಸ ನಂತಾಗುವರೇನಯ್ಯಾ ?
ಮಕ್ಕಾ ಬಿಟ್ಟು ಮದೀನಾಕ್ಕೆ ಹೋದವರೆಲ್ಲರೂ ಪೈಗಂಬರಾಗುವರೇನಯ್ಯ ?
ಸಂಗಮ ಬಿಟ್ಟು–ಕಲ್ಯಾಣಗಳಿಗೆ ಹೋದವರೆಲ್ಲ ಬಸವಣ್ಣರಾಗುವರೇನಯ್ಯ ?
ಬತ್ತಲೆಸೇವೆಯ ಮಾಡುವವರೆಲ್ಲರೂ ಅಕ್ಕಮಹಾದೇವಿಯಾಗುವರೇನಯ್ಯ ?
ಗುಂಡೇಟು ತಿಂದವರೆಲ್ಲಾ ಗಾಂಧೀಯಾಗುವರೇನಯ್ಯ ?
ಷಟ್‌ಸ್ಥಲ ಬ್ರಹ್ಮ ಗಂಗಾಧರ ಇಂತಿ ಹಲವು ಮಹಾತ್ಮರಂತಾಗಲು
ಕಾಯದ ಕಳವಳ ಕಳೆದವರಿಗಲ್ಲದೆ
ನರಿಯಂತಿರುವ ನರರಿಗೆ ಸಾಧ್ಯವೇನಯ್ಯ ?

–೨–

ಶೀಲದ ನಡೆ–ನುಡಿಯು ಪತಿತೆಗೆ ಸೇರದಯ್ಯ
ಕರುಣೆಯ ನಡೆ–ನುಡಿಯು ಕಟುಕನಿಗೆ ಸೇರದಯ್ಯ
ಶಾಂತಿಯ ನಡೆನುಡಿಯು ಕೋಪಿಗೆ ಸೇರದಯ್ಯ
ಪುಣ್ಯದ ನಡೆನುಡಿಯು ಪಾಪಿಗೆ ಸೇರದಯ್ಯ
ಷಟ್‌ಸ್ಥಲ ಬ್ರಹ್ಮ ಗಂಗಾಧರ
ನಮ್ಮ ಶರಣರ ನಡೆನುಡಿಯು
ದುಷ್ಕರ್ಮಿಗಳಿಗೆ ಸೇರದಯ್ಯ.

— ಬಸವರಾಜ ರೂವಾಲಿ ಶಿವಾಪುರ

# ಶಿರವಾಳದ ಶಿಲ್ಪ ವೈಭವ



## ಮೋಹನಚಂದ ಕಿರಣಗಿ

ಕಲೆ, ಧರ್ಮ, ಸಂಸ್ಕೃತಿ, ಸಾಹಿತ್ಯ, ಇತಿಹಾಸಗಳ ವೈಭವದ ವೈಜಯಂತಿಯನ್ನು ಮೆರೆದ ಕಲಬುರ್ಗಿ ಜಿಲ್ಲೆಯ ಅನೇಕ ಸಾಂಸ್ಕೃತಿಕ ಕೇಂದ್ರಗಳಲ್ಲಿ ಶಹಾಪುರ ತಾಲೂಕಿನ ಶಿರವಾಳ ಗ್ರಾಮವೂ ಒಂದು ಎಂಬ ಮಾತಿಗೆ ಎರಡು ಅಭಿಪ್ರಾಯಗಳಿಲ್ಲ. ಸಗರನಾಡಿನ ಗತಇತಿಹಾಸದ ವೈಭವದ ಗೀತವನ್ನು ಹಾಡಿಕೊಳ್ಳುತ್ತ, ಜೊತೆಗೆ ಇಂದಿನ ಅವನತಿಯ ಕೊರಗನ್ನು ತೋಡಿಕೊಳ್ಳುತ್ತ ಹರಿಯುತ್ತಿರುವ ಭೀಮಾನದಿಯ ಬಲಭಾಗದಲ್ಲಿ ನೆಲೆಸಿರುವ ಈ ಗ್ರಾಮವು ದೇಗುಲಗಳಿಂದಲೂ ಶಿಲಾ ಶಾಸನಗಳಿಂದಲೂ ಸಾಂಸ್ಕೃತಿಕ ಯಾತ್ರಾರ್ಥಿಗಳಿಗೆ ಒಂದು "ಪುಣ್ಯಧಾಮ" ವೆನಿಸಿದೆ.

ಭೀಮಾತೀರದ ಎಡಭಾಗಕ್ಕಿರುವ ಚಿತಾಪೂರ ತಾಲೂಕಿನ ಸನ್ನತಿ ಕ್ಷೇತ್ರವು ಅತ್ಯಂತ ಪ್ರಾಚೀನ ಬೌದ್ಧಧರ್ಮದ ಕೇಂದ್ರಗಳಲ್ಲೊಂದಾಗಿತ್ತೆಂದು ಇತಿಹಾಸ ತಜ್ಞರ ಅಭಿಪ್ರಾಯವಾಗಿದೆ. ಈ ಪ್ರಾಚೀನ ಬೌದ್ಧಕಾಲೀನ ಸಂಸ್ಕೃತಿಗೆ "ಶಿರವಾಳ" ಗ್ರಾಮವು ನಿಕಟ ಸಂಬಂಧವುಳ್ಳದ್ದಾಗಿತ್ತೆಂಬುವುದಕ್ಕೆ ಇತ್ತೀಚೆಗೆ ಇಲ್ಲಿ ಉಪಲಬ್ಧವಾಗಿರುವ "ಬೌದ್ಧರ ಸ್ತೂಪ" ಸ್ಪಷ್ಟ ನಿದರ್ಶನವಾಗಿದೆ. ಇದರಿಂದ ಈ ಗ್ರಾಮದ ಪ್ರಾಚೀನತೆ ನಮಗೆ ವ್ಯಕ್ತವಾಗುತ್ತದೆ.

ಹಿಂದೊಮ್ಮೆ ಈ ಗ್ರಾಮ ಶೈವಕೇಂದ್ರವಾಗಿತ್ತು ಎಂಬುದಕ್ಕೆ ವಿಭಿನ್ನ ಶಿಲ್ಪ ಮಾದರಿಯ ಹದಿನೈದು ದೇವಾಲಯಗಳು ರಾಷ್ಟ್ರಕೂಟರ ಕಾಲದಷ್ಟು ಪ್ರಾಚೀನವೆಂದು ತಿಳಿದು ಬಂದಿದೆ. (ಸಂ. ಕ. ೨೦-೧೧-೧೯೭೪). ಈ ದೇವಾಲಯಗಳ ಒಳಹೊಕ್ಕು, ಮನದ ಬಾಗಿಲ ತೆರೆದು, ಚೆಲ್ಲುವರಿದ ಶಿಲ್ಪ ಸೌಂದರ್ಯವನ್ನು ಶುದ್ಧ ರೂಪದಿಂದ ಸವಿಯುವಾಗ –

ಒಂದರೊಳು ಒಂದಿಲ್ಲ
ಒಂದರೊಳು ಕುಂದಿಲ್ಲ
ಒಂದೊಂದು ಅಂದ
ತನ ತನಗೆ ಚೆಂದ । ಎಂಬ ಕವಿ ಬೇಂದ್ರೆಯವ(ರ)
ವಾಣಿ ನೆನಪಾಗುತ್ತದೆ !

ಸಿದ್ಧಲಿಂಗೇಶ್ವರ ದೇವಾಲಯ :

ಇಲ್ಲಿರುವ ದೇವಾಲಯಗಳಲ್ಲಿ ಒಂದಾದ ಸಿದ್ಧಲಿಂಗೇಶ್ವರ ದೇವಸ್ಥಾನ ಅಪೂರ್ವವಾದದ್ದು. ಇದು (+) ಚಿನ್ಹೆಯ ಆಕಾರದಲ್ಲಿದ್ದು ಪಂಚಲಿಂಗಪೀಠಗಳನ್ನು ಗರ್ಭೀಕರಿಸಿಕೊಂಡಿದೆ. ಈ ಪಂಚಲಿಂಗಗಳಲ್ಲಿ ಪೂರ್ವ ದಿಕ್ಕಿನದು ಬಾಳೆಹಳ್ಳಿ ಪೀಠ, ಉತ್ತರದ್ದು ಕೇದಾರ ಪೀಠ, ಪಶ್ಚಿಮದ್ದು ಉಜ್ಜಯನಿ ಪೀಠ, ದಕ್ಷಿಣದ್ದು ಶ್ರೀಶೈಲ ಪೀಠ, ಮಧ್ಯದಲ್ಲಿರುವುದು ಕಾಶೀ ಪೀಠವೆಂದು ಅಲ್ಲಿಯ ಹಿರಿಯರು ಹೇಳುತ್ತಾರೆ. ನಾಲ್ಕು ಪ್ರವೇಶ ದ್ವಾರಗಳು ಆಕರ್ಷಕವಾಗಿವೆ. ರಂಗಮಂಟಪಗಳು ಮನಮೋಹಕವಾಗಿವೆ.

ಈ ಮಂಟಪಗಳಗೋಡೆ ಮತ್ತು ಕಂಬಗಳ ಮೇಲೆ ಕೆತ್ತಿರುವ ಅಪೂರ್ವ ಶಿಲ್ಪಕಲೆ ಪರಾಕಾಷ್ಠೆಯನ್ನು ಹೊಂದಿದ್ದು ನೋಡುವವರ ಕಣ್ಣಿಗೆ ಕಳೆ ತುಂಬುವುದು ! ಮನ ಮುಗ್ಧವಾಗುವುದು !!

ಈ ದೇವಾಲಯದ ದಕ್ಷಿಣ ರಂಗಮಂಟಪದಲ್ಲಿ ಶಿಲಾಶಾಸನವೊಂದಿದ್ದು ಅದರ ಆರಂಭ ಮತ್ತು ಕೊನೆಯ ಭಾಗ ಒಡೆದು ಹೋಗಿದೆ. ಅದಕ್ಕೆ ಆಗಾಗ ಸುಣ್ಣ ಬಳಿಯುವರಿಂದ ಅಕ್ಷರಗಳು ಅಸ್ಪಷ್ಟವಾಗಿ ಕಾಣಿಸುತ್ತವೆ. ಈ ಶಾಸನ ಗದ್ಯ ಮತ್ತು ಕಂದಗಳಿಂದ ಕೂಡಿ ಕನ್ನಡ ಭಾಷೆಯಲ್ಲಿ ರಚನೆಯಾಗಿದ್ದರೂ ಅಲ್ಲಲ್ಲಿ ಸಂಸ್ಕೃತ ಪದಗಳು ಬಳಕೆಯಾದದ್ದು ಕಂಡುಬರುತ್ತದೆ.

ಈ ಶಾಸನ ರಚಿಸಲಾದ ಕಾಲ ಶಕ ವರ್ಷ ೧೧೧೦ ಎಂದರೆ ಕ್ರಿ. ಶ. ೧೧೮೮. ಅದು ಚಾಲುಕ್ಯ ಚಕ್ರವರ್ತಿ ನಾಲ್ಕನೆಯ ಸೋಮೇಶ್ವರನ ಕಾಲ. ಶಾಸನದ ಮೊದಲ ಭಾಗ ಒಡೆದು ಹೋಗಿದ್ದುದರಿಂದ ಶಾಸನದ ಆರಂಭ ಮಹಾ ಮಂಡಲೇಶ್ವರನ ಬಿರುದಾವಳಿಗಳಿಂದ ಕೂಡಿರುತ್ತದೆ. ಸೇವುಣ ಯಾದವ ಅರಸನಾದ ಐದನೆಯ ಭಿಲ್ಲಮನ ಮಹಾ ಪಸಾಯಿತ ಅಧಿಕಾರಿಗಳಾದ ಪೆಮ್ಮಾಯಿಕರ ಹೆಸರು ಇದರಲ್ಲಿ ಪ್ರಸ್ತಾಪಿಸಿರುವುದು ಚಾರಿತ್ರಿಕ ದೃಷ್ಟಿಯಿಂದ ಬಹು ಮಹತ್ವ ಪೂರ್ಣವಾದುದು.

ಈ ಶಾಸನದಲ್ಲಿ ಉಲ್ಲೇಖಿತನಾಗಿರುವ ಶಿಲಾಹಾರ ವಂಶೋದ್ಭವನೂ ಎಳಮೇಲ್ಕೈಮತ್ತರ ಮಹಾ ಮಾಂಡಲಿಕನೂ ಆದ ಸಿಂಗಿ ದೇವರಸನು ಈ ಶಾಸನ ರಚನೆಯ ಕಾಲಕ್ಕೆ ಕಲ್ಯಾಣ ಚಾಲುಕ್ಯ ವಂಶದ ನಾಲ್ಕನೆಯ ಸೋಮೇಶ್ವರನ ಮಹಾ ಮಂಡಳೇಶ್ವರನಾಗಿದ್ದನೆಂಬುದು ವಿದಿತವಾಗುತ್ತದೆ.

ಸಿಂಗಿದೇವರಸನು ಅವ್ವ ನಾಗಲದೇವಿ, ಮಹಾಪ್ರಧಾನ ಸೇನಾಧಿಪತಿ ಘಟ್ಟಿಯ ಕೇತ ನಾಯಕ, ಮಹಾಪಸಾಯಿತ ಅಧಿಕಾರಿ ಪೆಯ್ಮನಾಯಕ, ಸಮಸ್ತ ಪರಿವಾರ ಸಮಕ್ಷಮ ಶಕ ವರ್ಷ ೧೧೧೦ ನೆಯ ಪ್ಲವಂಗನಾಮ ಸಂವತ್ಸರ ಭಾದ್ರಪದ ಬಹುಳ ಅಮಾವಾಸ್ಯೆ ಶುಕ್ರವಾರದ ಸೂರ್ಯಗ್ರಹಣದಂದು ಎಳಮೇಲ್ಕೈ ಮತ್ತರ (ಸಿಂದಗಿ ತಾಲೂಕಿನ ಎಳ ಮೇಲಿ) ಬಳಿಯ ಬಾಡ 'ಮುರುವಡಿ (ಇಂದಿನ ಮುರುಡಿ) ಅದರ ಮನ್ನೆಯರ ಮೇಲಾಳಿಕೆಯನ್ನು, ಸೀಮೆಯೊಳಗಣ ನಿಧಿ, ನಿಧಾನ, ನಿಕ್ಷೇಪ, ಪಾಷಾಣ ಮಾಳ, ವೃಕ್ಷ, ಗುಲ್ಮ, ಕಲಕಣಿ, ದಂಡದೋಷ ಕಾಣಿಕೆ ಮುಂತಾದವುಗಳನ್ನೆಲ್ಲ – ಶಿರವಾಳ ಪಟ್ಟಣದ ಶ್ರೀ ಸಿದ್ಧಸಾತೇಶ್ವರ ದೇವರ ಅಂಗಭೋಗ–ರಂಗಭೋಗಕ್ಕಾಗಿ, ಖಂಡ ಸ್ಫುಟಿತ ಜೀರ್ಣೋದ್ಧಾರಕ್ಕಾಗಿ, ಮತ್ತು ಅಲ್ಲಿ ವಾಸಿಸುವ ಶಿವಯೋಗಿಗಳ ಅಶನ ಆಚ್ಛಾದನೆಗಳಿಗಾಗಿ, ಅಲ್ಲಿಯ ಸ್ಥಾನಾಚಾರಿಯಾಗಿರ ಬಹುದಾದ ರೇವಣ ದೇವಯ್ಯನ ಪಾದ ಪ್ರಕ್ಷಾಳನ ಮಾಡಿ ದತ್ತಿ ನೀಡಿದುದು ಈ ಶಾಸನದಿಂದ ತಿಳಿದುಬರುತ್ತದೆ.

ಚಿಕ್ಕ ಗ್ರಾಮವಾಗಿರುವ ಇಂದಿನ ಶಿರವಾಳ ೯೦೦ ವರ್ಷಗಳ ಹಿಂದೆ ಅದೊಂದು ಸುಪ್ರಸಿದ್ಧ, ಸಂಪತ್ತಿನ ಪಟ್ಟಣವಾಗಿದ್ದಿತೆಂಬುದಕ್ಕೆ ಈ ಶಾಸನ ಸಾಕ್ಷಿಯಾಗಿದೆ. ಈ ಗ್ರಾಮವನ್ನು "ಸಿರಿ ಪೊಳಲು" (ಸಂಪತ್ತಿನ ಪಟ್ಟಣ) "ಧರ್ಮದ ಮನೆ" ಹಾಗೂ "ದಕ್ಷಿಣವಾರಣಾಸಿ" ಎಂದು ಇದರಲ್ಲಿ ಕೀರ್ತಿಸಲಾಗಿದೆ. ಚಾರಿತ್ರಿಕವಾಗಿ ಆ ಕಾಲಕ್ಕಾಗಲೇ ಅಲ್ಲಿ ಕಲ್ಲಿನ ಕಣಗಳು ಇದ್ದವೆಂಬುದು ಗಮನಾರ್ಹ ಸಂಗತಿ.

ಹನುಮಂತದೇವರ ದೇವಾಲಯದ ದೀಪಸ್ತಂಭದ ಮೇಲೆ ಶಾಸನವೊಂದು ಕೆತ್ತಲ್ಪಟ್ಟಿದ್ದು ಅದಕ್ಕೆ ಸುಣ್ಣ-ಬಣ್ಣ ಬಳಿದುದರಿಂದ ಓದಲು ಸಾಧ್ಯವಾಗುತ್ತಿಲ್ಲ. ಇಲ್ಲಿನ ಇನ್ನೊಂದು ಶಾಸನವನ್ನು ಕಲ್ಬುರ್ಗಿಗೆ ಸಾಗಿಸಿ ಸರ್ಕಾರಿ ಆಸ್ಪತ್ರೆಯ ಆವರಣದಲ್ಲಿ ಇಡಲಾಗಿದೆಯೆಂದು ಪ್ರಮುಖರು ಹೇಳುತ್ತಾರೆ.

**ಸೂರ್ಯ ದೇವಾಲಯ :**

ಇತ್ತೀಚೆಗೆ ಪುರಾತತ್ವ ಇಲಾಖೆಯವರು ನಡೆಸಿದ ಉತ್ಖನನದ ಫಲವಾಗಿ ಕಣ್ತಣಿಸುವ ಶಿಲ್ಪ ವೈಶಿಷ್ಟ್ಯದಿಂದ ಕೂಡಿದ "ಸೂರ್ಯದೇವಾಲಯ" ವೊಂದು

ಕತ್ತಲೆಯಿಂದ ಬೆಳಕಿಗೆ ಬಂದಿದೆ. ಇದು ಅಂತರ್ದೇವಾಲಯುವಾಗಿದ್ದು ಗರ್ಭಗುಡಿ, ಸಭಾಮಂಟಪ, ಪ್ರದಕ್ಷಣಾಪಥ ಎಲ್ಲವೂ ಸುಸ್ಥಿತಿಯಲ್ಲಿದ್ದು ಅಲ್ಲಿನ ಚಿತ್ರಗಳ ಚೆಲವು ನೋಡುವವರ ಮನದ ಮಂಟಪದಲ್ಲಿ ಹರ್ಷರಿಂಗಣ ಕುಣಿಸಿ, ತಣಿಸುವುದು.

**ಮಲ್ಲಿಕಾರ್ಜುನ ದೇವಾಲಯ :**

ಗ್ರಾಮದ ಮಹಾದ್ವಾರದ ಎದುರಿಗೆ ಮಲ್ಲಿಕಾರ್ಜುನ ದೇವಾಲಯವಿದ್ದು ಬಾದಾಮಿ ಚಾಲುಕ್ಯರ ಕಾಲದ ಶಿಲ್ಪವನ್ನು ನೆನಪಿಸುತ್ತದೆ. ಹದಿನೈದು ವರ್ಷಗಳ ಹಿಂದೆ ಹುಲ್ಲುಕಂಟಿಗಳಿಂದ ಇಡಿಕಿರಿದು, ಕಣ್ಕಪ್ಪಡಿ, ತೊಗಲು ಬಾವಲಿಗಳಿಗೆ ಆವಾಸ ಸ್ಥಾನವಾಗಿದ್ದ ಈ ದೇವಾಲಯ ಡಾ॥ ರುದ್ರಪ್ಪ ಆನೇಗುಂದಿ ಯವರ ಪರಿಶ್ರಮ ದಿಂದ ಜೀರ್ಣೋದ್ಧಾರಗೊಂಡು ಸುಂದರ ಸ್ವರೂಪವನ್ನು ತಾಳಿದೆ.

**ನನ್ನಯ್ಯ ನಾಗಯ್ಯರ ದೇವಾಲಯ :**

ಈ ಗ್ರಾಮದ ಪಶ್ಚಿಮಕ್ಕೆ ಪ್ರಯಾಣ ಬೆಳೆಸಿ, ಕಿರು ಹಳ್ಳ ದಾಟಿದಾಗ ಎತ್ತರದ ಪೀಠಗಳ ಮೇಲೆ ಕ್ರಮವಾಗಿ ಪ್ರತಿಷ್ಠಾಪಿಸಲ್ಪಟ್ಟ ಶಿವಲಿಂಗಗಳ ಸಾಲು ನಮ್ಮನ್ನು ಹರ್ಷಚಿತ್ತರನ್ನಾಗಿಸುತ್ತವೆ ! ಭಕ್ತಿಭಾವವನ್ನು ಉದ್ದೀಪನಗೊಳಿಸು ತ್ತವೆ !! ಸ್ವಲ್ಪ ಮುಂದೆ ನಡೆದರೆ ನಮ್ಮ ಕಾಲುಗಳಿಗೆ ಕೀಲು ಬಡಿದು ನಿಲ್ಲಿಸು ತ್ತವೆ, ನನ್ನಯ್ಯ-ನಾಗಯ್ಯರ ಅವಳಿ ದೇವಾಲಯಗಳು ! ಜಲ ಸೌಂದರ್ಯ ವನ ಸೌಂದರ್ಯಗಳ ಮಧ್ಯದಲ್ಲಿ ವಾಸ್ತು ಶಿಲ್ಪದ ಸುಂದರ ಆಭರಣಗಳಂತಿರುವ ಈ ದೇವಾಲಯಗಳು ನೋಡುವವರ ಅಂತರ್ಯವನ್ನು ಸೂರೆಗೊಳ್ಳುತ್ತವೆ.

**ಸುಜ್ಞಾನೇಶ್ವರ ದೇವಾಲಯ :**

ದುಷ್ಟ ಕಾರ್ಯಗಳಿಗೆ ಇನ್ನೊಂದು ಹೆಸರೆನ್ನಿಸಿದ್ದ ಮಾತಂಗನೆಂಬ ಬೇಡನ ಹೃದಯವನ್ನು ತಮ್ಮ ದರ್ಶನ ಸ್ಪರ್ಶನ ಭಾಗ್ಯದಿಂದ ಪರಿವರ್ತನೆಗೊಳಿಸಿದವರು ಸುಜ್ಞಾನೇಶ್ವರರು. ಈ ಗುರುಗಳ ಅನುಗ್ರಹ ದಿಂದ "ಮಾತಂಗ" ಓರ್ವ ಮಹಾ ಶರಣನಾಗಿ "ನನ್ನಯ್ಯ" ಎಂಬ ಹೆಸರಿನಿಂದ ಪ್ರಸಿದ್ಧನಾದನೆಂದು ವೀರಶೈವ ಪುರಾಣಗಳಿಂದ ತಿಳಿದುಬರುತ್ತದೆ. ಈ ಸುಜ್ಞಾನೇಶ್ವರರ ಸ್ಥಳ "ಶಿರವಾಳ" ಆಗಿತ್ತೆಂಬುದಕ್ಕೆ ನನ್ನಯ್ಯ ಶರಣರ ಚರಿತ್ರೆಯಲ್ಲಿ ಉಲ್ಲೇಖವುಂಟು.

ಸುಜ್ಞಾನೇಶ್ವರ ದೇವಾಲಯದ ಹತ್ತಿರವಿರುವ ಬಾವಿಯ ಭಿತ್ತಿಗಳ ಮೇಲೆ ಶಿಲ್ಪಿಗಳು ನಯನಾಜೂಕಿನಿಂದ ಕೆತ್ತಿರುವ ರಾಮಾಯಣದ ದೃಶ್ಯ, ಸಮುದ್ರ

ಮಥನ. ಕಿರಾತಾರ್ಜುನೀಯ ಪ್ರಸಂಗ, ಪಂಚತಂತ್ರದ ನೀತಿಕಥೆಗಳನ್ನು ಚಿತ್ರಿಸುವ ಸನ್ನಿವೇಶಗಳ ಸುಂದರ ಚಿತ್ರಗಳು ಇಂದಿಗೂ ನಿತ್ಯನೂತನವಾಗಿವೆ !

ಚಾಲುಕ್ಯ ಹಾಗೂ ರಾಷ್ಟ್ರಕೂಟರ ಕಾಲದ ವಾಸ್ತು ಶಿಲ್ಪವನ್ನು ಹೋಲುವ ಅತ್ಯಂತ ಸುಂದರವಾದ ದೇವಾಲಯಗಳಿಂದ ಗ್ರಾಮ ಇಡಿಕಿರಿದಿದ್ದು ಅವುಗಳನ್ನು ಜನರು ತಮ್ಮ ಆವಾಸಕ್ಕಾಗಿ, ಕೃಷಿಉಪಕರಣ, ಹೊಟ್ಟುಕಣಿಕೆಗಳನ್ನಿಡಲು ಬಳಸುತ್ತಿರುವುದರಿಂದ ದಿನಗಳೆದಂತೆ ಅವು ತಮ್ಮ ಅಂದಚೆಂದ ಕಳೆದುಕೊಳ್ಳುತ್ತಿರುವುದು ಒಂದು ದುರಂತ !

ಶಹಾಪುರ ಮತಕ್ಷೇತ್ರದ ಜನಪ್ರಿಯ ಶಾಸಕರಾಗಿರುವ ಶ್ರೀ ಶಿವಶೇಖರಪ್ಪ ಗೌಡರು ಇದೇ ಗ್ರಾಮದವರಾಗಿದ್ದು ಕರ್ತೃತ್ವಶಕ್ತಿಗೆ ಇನ್ನೊಂದು ಹೆಸರೆನಿಸಿದ್ದಾರೆ. ಅವರ ಪರಿಶ್ರಮ ಹಾಗೂ ಮುತುವರ್ಜಿಯಿಂದ ಈ ಗ್ರಾಮ ಚೇತರಿಸಿಕೊಳ್ಳ ತೊಡಗಿದೆ. ತಮ್ಮ ಗ್ರಾಮದ ಅಮೂಲ್ಯ ಆಸ್ತಿಯಾಗಿರುವ ಈ ಐತಿಹಾಸಿಕ, ಸಾಂಸ್ಕೃತಿಕ ಸಂಪತ್ತನ್ನ ಸಂರಕ್ಷಿಸುವ ಬಲವಾದ ಹಂಬಲ ಇವರಿಗಿದೆ. ಇವರ ಈ ಪವಿತ್ರವಾದ ಹಂಬಲಕ್ಕೆ ಸರಕಾರ ಹಾಗೂ ವಿಶ್ವವಿದ್ಯಾಲಯಗಳು ಬೆಂಬಲ ನೀಡಿ ಇನ್ನಷ್ಟು ಹೆಚ್ಚಿನ ಸಂಶೋಧನೆ ನಡೆಸಿದರೆ ಕರ್ನಾಟಕದ ಇತಿಹಾಸದ ಮೇಲೆ ಹೆಚ್ಚಿನ ಹೊಸ ಬೆಳಕು ಚೆಲ್ಲಿದಂತಾಗುತ್ತದೆ ! ಶಿಲ್ಪ ವೈಭವದ ಶಿರವಾಳದ ಪುಣ್ಯ ಭೂಮಿಯತ್ತ ರಸಯಾತ್ರಿಕರು ಧಾವಿಸುವಂತಾಗುತ್ತದೆ. ●

(ವಿವಿಧ ಮೂಲಗಳಿಂದ)

---

## ಮೂಗುತಿ

ಕೃಷ್ಣ ಹರಿದು ತನ್ನ ತೋಳ ಸೆರಗು ಹೊಚ್ಚಲು
ಹಳ್ಳಿಗೆಳೆಯ ಒಡಲು ತುಂಬಲು
ಹಾಲು ಹೈನ ಬುತ್ತಿ ಹಿಗ್ಗು ಹಿಂಗಲು
ಭೀಮೆ ದಂಡೆಯ ರೈತ ಸಟೆದು ನಾಡಗೀತೆ ಹಾಡಲು
ಕನ್ನಡ ಸಿರಿಯ ಸೊಬಗು ಮೂಗುತಿ ನೋಡಲು ಈ ನೆಲಕೆ ಬನ್ನಿ.

— ಸಿದ್ದರಾಮ ಉಪ್ಪಿನ್

# "ಪಾಶುಪತಾಸ್ತ್ರ ಪ್ರಾಪ್ತಿ ಪ್ರಸಂಗ"

## ಒಂದು ಚಿಂತನೆ

● ●

## ಮಹಾಂತಪ್ಪ ಜಾಗಟೆ ದೋರನಹಳ್ಳಿ

"ಪಾಶು ಪತಾಸ್ತ್ರ ಪ್ರಾಪ್ತಿ ಪ್ರಸಂಗ" ಎಂಬುದು ಒಂದು ಸಂಶೋಧನಾತ್ಮಕ ಗ್ರಂಥ. ವಿಷಯ ಹಳೆಯದಾದರೂ, ಅದರ ಮೇಲೆ ಚೆಲ್ಲಿದ ಬೆಳಕು ತೋರ್ಪ ಡಿಸಿದ ವಿಚಾರಗಳು ಹೊಚ್ಚ ಹೊಸವು ಅಷ್ಟೇ ಅಲ್ಲ ಮಹಾಕವಿಗಳ ವಂಶ ವೃಕ್ಷ ವನ್ನೇ ಹಿಡಿದು ಅಲ್ಲಾಡಿಸಿದಂತಾಗಿದೆ. ವಿಮರ್ಶಕರು ವೃಕ್ಷದಲ್ಲಿಯ ಎಲೆ ಹೂವು ಕಾಯಿಗಳೊಡನೆ ಸರಸವಾಡಿ ಆನಂದಪಟ್ಟು ಅವುಗಳ ಗುಣ ವರ್ಣನೆ ಮಾಡುವ ಗೊಡವೆಗೆ ಹೋಗದೆ ನೇರವಾಗಿ ಅದರ ಬೇರಿಗೆ ಕೈಹಾಕಿದ್ದಾರೆ. ಒಂದೇ ಯುಗ ದಲ್ಲಿ ಬಾಳಿಬದುಕಿ "ಕರ್ನಾಟಕ ಭಾರತ-ಕಥಾಮಂಜರಿ" ಕಾವ್ಯ ರಚಿಸಿದ ಕುಮಾರ ವ್ಯಾಸ ಹಾಗು ಪ್ರಭುಲಿಂಗಲೀಲೆಯ ಕರ್ತೃ ಚಾಮರಸ ಇವರಿಬ್ಬರೂ ಬೇರೆಬೇರೆ ವ್ಯಕ್ತಿಗಳಾಗಿರದೆ ಒಬ್ಬನೇ ವ್ಯಕ್ತಿ ಎರಡು ಹೆಸರುಗಳಿಂದ ಕಾವ್ಯ ರಚನೆ ಮಾಡಿ ದ್ದಾನೆ ಎಂದು ಸಾಧಿಸುವ ಪ್ರಯಾಸ ಮಾಡಿದ್ದಾರೆ ಶ್ರೀ ಬಿ. ಮಹಾದೇವಪ್ಪ ನವರು. ಇವರ ಪ್ರಯಾಸ ಶ್ಲಾಘನೀಯ, ಇಟ್ಟ ಹೆಜ್ಜೆ ದಿಟ್ಟವಾದದ್ದು. ಇವರ ಹೇಳಿಕೆಯನ್ನು ನಂಬುವುದು ನುಂಗಲಾಗದ ತುತ್ತಾದರೂ ಇವರು ಕೊಡುವ ಕಾರಣಗಳು ತೋರಿಸುವ ಸಾಮ್ಯಗಳು ಎರಡೂ ಕಾವ್ಯಗಳಲ್ಲಿಯ ಕೆಲವು ಅಂಶ ಗಳನ್ನು ಹೆಕ್ಕಿ ತೆಗೆದು ತೋರಿಸುವ ಉದ್ಧರಣೆಗಳನ್ನು ಗಮನಿಸಿದರೆ ಕ್ರಮೇಣ ಒಪ್ಪುವ ಕಡೆವಾಲುವಂತೆ ಮಾಡುತ್ತವೆ. ಆದರೂ ಸಂಪ್ರದಾಯ ಶರಣ ಮನಸ್ಸು ಏಕೋ ಹಿಂದೇಟು ಹಾಕುತ್ತದೆ.

ಭಾಮಿನಿ ಷಟ್ಪದಿಯ ಪ್ರಪಂಚದಲ್ಲಿ "ಭಾರತ ಕಥಾಮಂಜರಿ" ಹಾಗು "ಪ್ರಭುಲಿಂಗಲೀಲೇ" ಕಾವ್ಯಗಳು ಸೂರ್ಯ ಚಂದ್ರರಿದ್ದಂತೆ.

ಕುಮಾರವ್ಯಾಸ ತನ್ನ ಕಾವ್ಯದ ಪ್ರಾರಂಭದಲ್ಲಿ

ಅರಸುಗಳಿಗಿದು ವೀರ ದ್ವಿಜರಿಗೆ
ಪರಮ ವೇದದ ಸಾರ ಯೋಗೀ
ಶ್ವರರ ತತ್ವವಿಚಾರ ಮಂತ್ರಿ ಜನಕ್ಕೆ ಬುದ್ಧಿಗುಣ ।
ವಿರಹಿಗಳ ಶೃಂಗಾರ ವಿದ್ಯಾ
ಪರಿಣತರಲಂಕಾರ ಕಾವ್ಯಕೆ
ಗುರುವೆನಲು ರಚಿಸಿದ ಕುಮಾರವ್ಯಾಸ ಭಾರತವ

ಎಂದು ತನ್ನ ಕಾವ್ಯದ ಗುಣಲಕ್ಷಣಗಳನ್ನು ಹೇಳಿಕೊಳ್ಳುತ್ತ ಕಾವ್ಯಗಳಲ್ಲಿಯೇ ಇದೊಂದು ಮೇರುಕೃತಿ ಎಂದು ಹೇಳಿಕೊಂಡರೂ ನಾನು ಕೇವಲ ಲಿಪಿಕಾರನು ಗದುಗಿನ ವೀರನಾರಾಯಣನೇ ಕವಿ ಎಂದು ವಿನಯದ ಪ್ರದರ್ಶನವನ್ನೂ ಸಹ ಮಾಡಿದ್ದಾನೆ.

ಚಾಮರಸನೂ ಕೂಡ ತನ್ನ ಕಾವ್ಯ ಪ್ರಭುಲಿಂಗಲೀಲೆಯ ಪ್ರಾರಂಭದಲ್ಲಿ ತನ್ನ ಕಾವ್ಯವನ್ನು ಕುರಿತು –

ಸತ್ತವರ ಕಥೆಯಲ್ಲ ಜನನದ
ಕುತ್ತದಲಿ ಕುದಿ ಕುದಿದು ಕರ್ಮದ
ಕತ್ತಲೆಗೆ ಸಿಲುಕುವರ ಸೀಮೆಯ ಹೊಲಬುತಾನಲ್ಲ ।
ಹೊತ್ತು ಹೋಗದೆ ಪುಂಡನಾಲಿಪ
ಮತ್ತ ಮತಿಗಳ ಗೋಷ್ಠಿಯಲ್ಲಿದು
ಸತ್ಯ ಶರಣರು ತಿಳಿವುದೀ ಪ್ರಭುಲಿಂಗಲೀಲೆಯನು ।

ಎಂದು ಹೇಳುತ್ತ ವೀರತನದಿಂದ ಕಾದಿದ ಕಲಿಗಳು, ವೇದದ ಸಾರ ತಿಳಿದ ದ್ವಿಜರು ತತ್ವಗಳನ್ನೇ ಕುರಿತು ತರ್ಕಮಾಡಿದ, ಬುದ್ಧಿ ಮತ್ತೆಯ ಪ್ರದರ್ಶನ ಮಾಡಿ ಮೆರೆದ ಮಂತ್ರಿಗಳು, ಜೀವನ್ಮುಕ್ತಿಯ ಮಾರ್ಗ ಕಾಣದೆ ಬಾಳಿನುದ್ದಕ್ಕೂ ಇಚ್ಛಾಪೂರ್ತಿಗಾಗಿ ಹೆಣಗಾಡಿ ಕೊನೆಗೊಮ್ಮೆ ಸತ್ತು ಹೋಗುತ್ತಾರೆ. ಅಂಥ ವ್ಯರ್ಥ ಸತ್ತವರ ಕಥೆ ಪ್ರಭುಲಿಂಗಲೀಲೆಯಲ್ಲ. ಪುನರಪಿ ಜನನಂ ಪುನರಪಿ ಮರಣಂ ಎಂಬುದು ಇಲ್ಲಿ ವರ್ಜ್ಯ. ಈ ಕಾವ್ಯವನ್ನು ಹೇಳುವವನು ನಾನಲ್ಲ, ಕೇಳುವವರು ಮನುಷ್ಯರಲ್ಲ. ಹೇಳುವವನು ಶಿವನು. ಕೇಳುವವರು ಶಿವಭಕ್ತರು.

ಜೀವನ್ಮುಕ್ತಿಯು ಮಾರ್ಗ ತೋರಿಸುವದೇ ಈ ಕಾವ್ಯದ ಉದ್ದೇಶ ಎನ್ನುತ್ತಾನೆ ಕವಿ ಚಾಮರಸ. ಎಲ್ಲಾ ಹಂತದಲ್ಲಿಯೂ ಶಿವ ಪಾರಮ್ಯವನ್ನೇ ಮೆರೆದ ಚಾಮರಸ ಶೈವಕವಿ ಎಂಬುದು ಕವಿಚರಿತೆಕಾರರ ಒಟ್ಟಾಭಿಪ್ರಾಯ.

ಒಂದೆಡೆ ಕುಮಾರವ್ಯಾಸ ತನ್ನ ಕಾವ್ಯ ಓದಿದವರಿಗೆ – ಗಂಗಾನದಿಯಲ್ಲಿ ಸ್ನಾನಮಾಡಿದ ಫಲ, ಕನ್ಯಾದಾನಮಾಡಿದಫಲ, ವಸ್ತ್ರದಾನಮಾಡಿದ ಫಲ ದೊರಕುತ್ತದೆ ಎಂದು ವೈದಿಕ ಧರ್ಮದ ಪ್ರಚಾರಕನಂತೆ ವರ್ಣಿಸಿದ್ದಾನೆ. ಇದು ಕೂಡ ಒಂದು ರೀತಿಯ ಶೋಷಣೆಯ ಸಂಕೇತ.

ಇಲ್ಲಿ ಓದುಗರು ಚಿಂತನೆಗೆ ತೊಡಗಿದಾಗ ಇಬ್ಬರ ಸ್ವಭಾವಗಳಲ್ಲಿ ಸಾಕಷ್ಟು ಅಂತರವನ್ನು ಕಾಣುತ್ತೇವೆ. ಕುಮಾರವ್ಯಾಸನು ಇಹಕ್ಕಾಗಿ ಹೋರಾಟ ಮಾಡಿದರೆ ಚಾಮರಸನು ಪರಕ್ಕಾಗಿ ಹೋರಾಟ ಮಾಡಿದ್ದಾನೆ. ಮಹಾಭಾರತದ ತುಂಬೆಲ್ಲ ಗಂಡುಗಳು ಹೆಣ್ಣಿನ ಬೆನ್ನುಹತ್ತಿ ಸೋತು ಸುಣ್ಣವಾಗಿ ಕಾಲಗರ್ಭದಲ್ಲಿ ಸೇರಿ ಹೋಗಿವೆ. ಆದರೆ ಪ್ರಭುಲಿಂಗಲೀಲೆಯಲ್ಲಿ ಹೆಣ್ಣೆ ಗಂಡಿನ ಬೆನ್ನು ಹತ್ತಿ ಸೋಲನೊಪ್ಪಿಕೊಂಡ ನಿದರ್ಶನವಿದೆ. ನಾವು ಕಥಾವಸ್ತು ನೋಡಬೇಕಾಗಿಲ್ಲ ಅದರ ಹಿಂದಿರುವ ಕವಿಯ ಉದ್ದೇಶ ನೋಡಬೇಕಷ್ಟೆ. ಕವಿ ತನ್ನ ತಲೆಮಾರಿನ ಜನತೆಗೆ ಯಾವ ಸಂದೇಶ ಕೊಡಬಯಸುತ್ತಾನೆ. ಯಾವ ಪುರುಷಾರ್ಥ ಸಾಧನೆಗಾಗಿ ಜನರನ್ನು ಸಜ್ಜುಗೊಳಿಸುತಿದ್ದಾನೆ ಎಂಬುದು ಗಮನಿಸಬೇಕಾದ ಅಂಶ. ಕೇವಲ ಮೇಲ್ನೋಟಕ್ಕೆ ಎರಡೂ ಕಾವ್ಯಗಳಲ್ಲಿಯು ಆದಿಪ್ರಾಸ ಪದಪ್ರಯೋಗ, ಉದ್ಗಾರ ವಾಚಕಗಳು ಒಂದೇ ತೆರನಾಗಿ ಕಾಣುತ್ತವೆ. ಎಷ್ಟೊ ಸಲ ಒಂದೇ ಹೋಲಿಕೆಯು ಇಬ್ಬರು ವ್ಯಕ್ತಿಗಳು ನೋಡಲು ಸಿಗುತ್ತಾರೆ. ಅವರಿಬ್ಬರನ್ನೂ ಅಣ್ಣ ತಮ್ಮಂದಿರೆಂದು ಕರೆಯಲಾದೀತೇ ?

ಆ ಕಾಲದಲ್ಲಿ ಕಾವ್ಯನಾಮ ಇಟ್ಟುಕೊಳ್ಳುವ ಸಂಪ್ರದಾಯ ಅಷ್ಟಾಗಿ ಇನ್ನೂ ಜಾರಿಗೆ ಬಂದಿರಲಿಲ್ಲ. ಆದಿಕವಿ ಪಂಪನಿಂದ ಪ್ರಾರಂಭಿಸಿ ಜೈನಕವಿಗಳೆಲ್ಲ ತಮ್ಮ ಕಾವ್ಯಗಳನ್ನು ಚಂಪುವಿನಲ್ಲಿಯೇ ಬರೆದರು. ಒಂದು ಧಾರ್ಮಿಕ ಕಾವ್ಯ ಒಂದು ಲೌಕಿಕ ಕಾವ್ಯ ಅದೂ ತಮಗೆ ಆಶ್ರಯ ಕೊಟ್ಟವರ ಕುರಿತು. ಹೆಸರಾಂತ ಕವಿಗಳಿಗೆ ಬಿರುದುಗಳಿದ್ದುವೇ ಹೊರತು ಕಾವ್ಯನಾಮ ಇಟ್ಟುಕೊಂಡಂತೆ ಕಂಡು ಬರುವದಿಲ್ಲ. ಕುಮಾರವ್ಯಾಸನು "ಕರ್ನಾಟಕ ಭಾರತ ಕಥಾಮಂಜರಿ" ಯಂಥ ಶ್ರೇಷ್ಠ ಕೃತಿ ರಚಿಸಿ ಕೀರ್ತಿಯ ಶಿಖರಕ್ಕೇರಿದಾಗ ಹೆಸರು ಬದಲಿಸಿಕೊಂಡು ಕಾವ್ಯ ರಚಿಸಲು ಕಾರಣವೇನಿತ್ತು ? ರಾಜಕೀಯವಾಗಿ, ಧಾರ್ಮಿಕವಾಗಿ, ಸಾಮಾಜಿಕವಾಗಿ ಒತ್ತಡವೇನಾದರೂ ಇತ್ತೇ ? ಹಾಗೂ ಕಂಡು ಬರುವದಿಲ್ಲ.

ಸಂಶೋಧನೆ ಸಾಕ್ಷಾಧಾರಗಳ ಮೇಲೆ ನಡೆಯಬೇಕೇ ಹೊರತು ಬರೀ ಊಹೆಗಳ ಮೇಲಲ್ಲ ಎಂದಿದ್ದಾರೆ ಲೇಖಕ ಶ್ರೀ ಬಿ. ಮಹಾದೇವಪ್ಪನವರು. ಇಲ್ಲಿ ಕವಿಗಳಿಬ್ಬರೂ ತಮ್ಮ ಜನನದ ಬಗ್ಗೆ, ತಂದೆತಾಯಿಗಳ ಬಗ್ಗೆ ಕಾಲಮಾನದ ಬಗ್ಗೆ ಎಲ್ಲಿಯೂ ನಿಖರವಾಗಿ ಹೇಳಿ ಕೊಂಡಿಲ್ಲ. ಈಗ ಅದೇನಿದ್ದರೂ ದಂತಕಥೆಗಳ ಮೂಲಕ, ಕವಿಚರಿತೆಕಾರರ ಊಹಾತ್ಮಕ ಸಂಶೋಧನೆಗಳ ಮೂಲಕ ದೊರೆಯುವ ಮಾಹಿತಿಗಳು ಮಾತ್ರ. ಅವನ್ನೂ ಸಹ ನಂಬುವುದು ಕಷ್ಟವೆಂದಾದರೆ ಇಡೀ ಕನ್ನಡ ಸಾಹಿತ್ಯ ಲೋಕವೇ ಭ್ರಮಾಲೋಕವಾಗಿ ಪರಿಣಮಿಸುತ್ತದೆ. "ಕವಿರಾಜಮಾರ್ಗ" ಒಂದು ಲಕ್ಷಣ ಗ್ರಂಥ. ದೊರೆತ ಉಪಲಬ್ಧಿಗಳಲ್ಲಿ ಮೊದಲನೆಯದೆಂದೂ ಹೇಳಲಾಗುತ್ತದೆ. ಇದರ ಕರ್ತೃವಿನ ಬಗ್ಗೆ ಇನ್ನೂ ವಾದ ವಿವಾದ ನಿಂತಿಲ್ಲ. ಅದೂ ಅಲ್ಲದೆ ಶಿವಕೋಟ್ಯಾಚಾರ್ಯರಿಂದ ರಚಿಸಲಾಯಿತೆನ್ನಲಾದ "ವಡ್ಡಾರಾಧನೆ" ಕೃತಿ ಕವಿರಾಜಮಾರ್ಗದ ಜೇಷ್ಠತೆಯನ್ನೇ ಪ್ರಶ್ನಿಸುವಂತಿದೆ. ಕೆಲವೊಂದು ಸಲ ಹಳೆಯ ವಿಷಯಂಗಳ ಬಗ್ಗೆ ನಿರ್ಧಾರಕ್ಕೆ ಬರುವಾಗ ಹಿಂದಿನ ವಿದ್ವಾಂಸರು ಆ ವಿಷಯಗಳ ಬಗ್ಗೆ ಅಳೆದುಸುರಿದು ಕೈಕೊಂಡ ನಿರ್ಧಾರವನ್ನೇ ಬೆಂಬಲಿಸಬೇಕಾಗುತ್ತದೆ. ಇದರರ್ಥ ಭೂಮಿಯಸುತ್ತ ಸೂರ್ಯ ತಿರುಗುತ್ತಾನೆ ಎಂದು ಒಪ್ಪಿಕೊಳ್ಳಬೇಕೆಂದಲ್ಲ.

ಶ್ರೀ ಬಿ. ಮಹಾದೇವಪ್ಪನವರು "ಕರ್ನಾಟಕ ಭಾರತ ಕಥಾಮಂಜರಿ" ಯನ್ನು ಹಾಗು ಅದರ ಕರ್ತೃ ಕುಮಾರವ್ಯಾಸನನ್ನು ಕುರಿತು ಅಲ್ಲದೆ "ಪ್ರಭುಲಿಂಗಲೀಲೆ" ಮತ್ತು ಅವರ ಕರ್ತೃ ಚಾಮರಸನನ್ನು ಕುರಿತು ಬಹು ಗಂಭೀರವಾಗಿ, ಆಳವಾಗಿ ಅಧ್ಯಯನ ಮಾಡಿದ್ದಾರೆ, ಚಿಂತನೆ ಮಾಡಿದ್ದಾರೆ. ಎರಡರಲ್ಲಿಯ ಕಾವ್ಯಲಕ್ಷಣಗಳು ವಿಷಯ ಮಂಡನ ವಿಧಾನ, ಪಾತ್ರಗಳ ಸೃಷ್ಟಿ ಇವು ನಾಟಕೀಯವಾಗಿ ರೂಪುಗೊಂಡು ಇಬ್ಬರೂ ಕವಿಗಳನ್ನು ಅಭಿನ್ನರೆನ್ನುವಂತೆ ಮಾಡಿವೆ. ಲೇಖಕರು ತಮ್ಮ ಅನಿಸಿಕೆಯನ್ನು ಬಹು ಪ್ರಾಮಾಣಿಕವಾಗಿ ಅಷ್ಟೇ ಶಾಸ್ತ್ರೀಯವಾಗಿ ಪ್ರತಿಪಾದಿಸಿದ್ದಾರೆ. ಅವರು ತಮ್ಮ ವಾದವನ್ನು ಭದ್ರಬುನಾದಿಯ ಮೇಲೆ ನಿಲ್ಲಿಸಿದ್ದಾರೆ. ಬಡಪೆಟ್ಟಿಗೆ ಅದು ಬೆದರದು. ಅವರ ಅಭಿಪ್ರಾಯವನ್ನು ಲಘುವಾಗಿ ತಳ್ಳಿಹಾಕುವಂತೆಯೂ ಇಲ್ಲ. ಕುಮಾರವ್ಯಾಸ ಮತ್ತು ಚಾಮರಸ ಕವಿಗಳು ಇಬ್ಬರೂ ಬೇರೆ ಬೇರೆ ಅಲ್ಲ ಇಬ್ಬರೂ ಅಭಿನ್ನರು ಎಂದು ಒಪ್ಪಿಕೊಳ್ಳಲು ಸಾಕ್ಷಾಧಾರಗಳು ಸಾಲವೇನೋ ಎಂದೆನಿಸುತ್ತದೆ. ಮುಂದಿನ ಬೆಳವಣಿಗೆಗಾಗಿ ಕಾದು ನೋಡುವುದು ಉತ್ತಮ.

# ಲಂಚ

ತ್ರೇತಾಯುಗದಲ್ಲಿ ರಾಮಾವತಾರ
ದ್ವಾಪರಯುಗದಲ್ಲಿ ಕೃಷ್ಣಾವತಾರ
ಕಲಿಯುಗದಲ್ಲಿ ಲಂಚಾವತಾರ
ಎಲ್ಲದಕ್ಕೂ ಪರಿಹಾರವುಂಟು
ಲಂಚಾವತಾರಕ್ಕೆ ಎಲ್ಲವು ನಂಟು
ನಿನ್ನ ಹೆಸರು ಕೇಳಿದರೆ ಸಾಕು
ಸತ್ಯವನು ಬಾಯ್ಮುಚ್ಚಿರೆಯಬೇಕು
ನೀ ಕಲಿಯುಗದ ಅಸುರ
ನಿನ್ನಳಿಸಲು ಬರಬೇಕು ಪ್ರಜೆಯೆಂಬ ಸುರ

● ವೀರೇಶ ಎಸ್. ಸಿರಸಗಿ

# ಗ್ರಹ-ಉಪಗ್ರಹ

ಅಗ್ನಿ ಸುತ್ತಲು ಸುತ್ತಿ ತಾಳಿಕಟ್ಟಿ
ಸಂಪ್ರದಾಯದೊಂದಿಗೆ ಮದುವೆಯಾಗಿದ್ದೆ
ಮನಸ್ಸಿಲ್ಲದವಳನ್ನು
ಸಂದಿಗೊಂದಿ ಸುತ್ತಿ ಮನಕದ್ದು
ನನ್ನೊಡನಿದ್ದಾಳೆ – ಮನಸ್ಸಿದ್ದವಳು
ಒಬ್ಬಳು ಗ್ರಹದಲ್ಲಿ
ಇನ್ನೊಬ್ಬಳು ಉಪಗ್ರಹದಲ್ಲಿ

● ಮಹಿಪಾಲರೆಡ್ಡಿ ಎನ್. ಮುನ್ನೂರು ಸೇಡಂ

# ಒಲವು

ಒಲವು ತುಂಬಿರುವ ಈ ಬದುಕಿಗೆ ಬೇಕಿಲ್ಲ ಹಣವು
ನಾವಿಬ್ಬರು ಒಂದಾಗಿರಲು ಇನ್ನಿಲ್ಲ ಅಳಿವು
ನಿನ್ನ ಕಣ್ಣು-ತುಟಿಗಳಲ್ಲಿ ಎಂಥದೋ ಸೆಳವು
ನೀ ನನ್ನೊಡನಿದ್ದರೆ ಬಾಳ ಪಂದ್ಯದಲ್ಲಿ ಸದಾ ಗೆಲುವು

● ಜೆ. ನುರಿಸ್ವಾಮಿ ಕೊಪ್ಪಳ

# ಐದು ಹನಿಗಳು

## ಬಿಂಬ

ನೆನಪ ಕಿತ್ತೊಗೆಯಲಿಕ್ಕೆ
ಹವಣಿಸಿದ ಅವಳ ನೆನಪ
ಗರ್ಭದೊಳಗೆ ಅವನದೇ ಬಿಂಬ

## ಅಚ್ಚರಿ

ಕುಡಿ ಕುಡಿದು ಬಂದು
ಹೊಡೆ ಹೊಡೆದರು "ಅವ" ಬೇಡವಾಗಲಿಲ್ಲ.
ಮನಸ್ಸಿನಾಳದ ಹೊಂಡದಲ್ಲಿ
ಅವ-ಆಮೆಯಾಗಿ ಸುಳಿಯುವದು ನಿಲ್ಲಲಿಲ್ಲ.

● ಜಯಶ್ರೀ ಕುಲಕರ್ಣಿ ಚಿಂಚೋಳಿ

## ಹಟ

ಹಟವೋ ಹಟ
"ಆಟಿಕೆ" ಬೇಕೆಂಬ
ನನ್ನಾಕೆಗಿನ್ನೂ... ನಾಲ್ಕು ತಿಂಗಳು

## ನನ್ನಾಕೆ

ನನ್ನಾಕೆ
ಬಲು ಚೆಲುವೆ
ಮೊಂಡು ಮೂಗು
ಸಣ್ಣ ಕಣ್ಣು ತೊಳೆದ ಕೆಂಡವವಳ ಬಣ್ಣ
ಆದರೂ... ಚೆಲುವೆ – ಯಾಕೆಂದ್ರೆ
ನಾನವಳ ಗಂಡ

● ಶುಭಶ್ರೀ ದೀಕ್ಷಿತ

## ಗೆಳತಿ

ನೀ ಬರುವ ದಾರಿಗೆ ಹೂ... ಚೆಲ್ಲಲಾರೆ
ಆದರೆ
ನಿರಂತರ ಬದುಕಿಗೆ ಚೇತನ ನೀಡುವ
ಹೂ... ಮುತ್ತೊಂದನ್ನು ನೀಡಬಲ್ಲೆ

★ ಗೌತಮ ಶಿವ್ಯಾಪುರಿ

# ಎರಡು ಹನಿಗವನ

-೧-

ತರಗೆಲೆಗಳಂತೆ
ಇನ್ನೇನು
ನಿನ್ನ ನೆನಪುಗಳೆಲ್ಲ
ಉದುರಿದವು ಎಂದು
ನಿಟ್ಟುಸಿರೊಂದು ಬಿಟ್ಟೆ
ಆದರೇನು
ಚಿಗುರೆಲೆಗಳ ಹಸಿರ ತೇರಿನಲಿ
ಮರಳಿ ನೀ ತೇಲಿ
ಬರುವಿಯೆಂದು ತಿಳಿದಿರಲಿಲ್ಲ

-೨-

ಯಾಕೋ ಗೊತ್ತಿಲ್ಲ
ನಮ್ಮ ಜನಗಳಿಗೆ ಏನೋ ಆಗಿದೆ
ಏನೋ ಆಗಿ ಶತಮಾನಗಳೇ ಕಳೆದಿರಬೇಕು
ಆದರೂ ನೋಡಿ
ಇನ್ನೂ ಆಶ್ವಾಸನೆಗಳನ್ನೇ ನಂಬಿ
ಆಶ್ವಾಸನೆಗಳನ್ನೇ ತಿಂದು ಕುಡಿದು
ಜೀವಿಸುತ್ತಿದ್ದಾರೆ ಅಲ್ಲ
ನನಗೆ ಆಶ್ಚರ್ಯವಾಗುತ್ತಿದೆ
ಈ ವಿಷಯ ಇನ್ನೂ ಯಾಕೆ
ಗಿನ್ನಿಸ್ ಪುಸ್ತಕದಲ್ಲಿ ದಾಖಲಾಗಿಲ್ಲ ಎಂದು.

● ಎಸ್. ಜಿ. ಸ್ವಾಮಿ

# ಬಲಿ

ಮೋಡದೊಡಲಿನ ನೀರು
ಸದಾ ಸುರಿಸುವ ಕಣ್ಣು
ಪಾಚಿಗಟ್ಟಿದ ನೆಲ
ಹಸನಾಗುವದಿಲ್ಲ.

ಆಧುನಿಕತೆಗೆ ಮನಸೋತು
ಒಲೆ ಬದಲಿಸಿದರೂ
ದಹಿಸಿ ತಿನ್ನುವ ಕ್ರಿಯೆ
ನಿಲ್ಲುವದಿಲ್ಲ.

ಯೋಜನೆಯು ಉಳಿತಾಯು
ಸಾಲವೆ ಬಳಕೆದಾರ
ಉರಿವ ನಾಲಿಗೆ ಚಾಚಿ
ಇದ್ದಲಿ ತುಂಡಿಗೆ ಬೆಲೆ

ಆವಿಯಾದಂತೆ ಎಣ್ಣೆ
ಬೆಂದ ಬಾಳಿನ ಹೆಣ್ಣು
ದಿನಾಸುಡುವ ಬೆಂಕಿಗೆ
ಸಾವಿರಾರು ನಾಲಿಗೆ.

ಆಶೆಯು ಹಕ್ಕಿಗೆ
ಬಾಗಿಲು ಮುಚ್ಚಿ
ಬೆಂಕಿಗೆ ಮೈಯೊಡ್ಡಿದಂತೆ
ನೋವಿನ ಕೂಗು.

ಕಾಲುವೆ ಮೇಲಿನ
ಸುಂಟರ ಗಾಳಿಗೆ
ಸಾಲುಮರ ಸುಟ್ಟಂತೆ
ಹೆಣ್ಣಿನ ಗೋಳು.

• ಸೂಗಯ್ಯ ಹಿರೇಮಠ

# ಮೌನರಾಗ

ನನ್ನ ಹೊಲದಲ್ಲಿ ಠಾವುಗೈದಾಗ
ಮನೆ ಮಠ ಊರು ನಗರಗಳು
ನನ್ನಂತರಂಗದಲ್ಲಿಯೇ ಮೂಡಿದವು

ನಾನು ಬರೆದ ಕಥೆ ಕವನಗಳಿಗೆ
ಜೀವ ಬರುವದೆಂದು
ರಾತ್ರಿಯ ಕತ್ತಲು ಸರಿಯುವದೆಂದು
ನನ್ನ ಹೊಲದಲ್ಲಿ ಠಾವುಗೈದಾಗ
ಯೋಚಿಸುತ್ತ ತಲ್ಲೀನನಾದೆ
ಆತುರದಿಂದ ಕಾತುರಗೊಂಡೆ

ಆವರಿಸುವ ನಿದ್ರೆಗೆ ಭಾರಿ ಕಾವಲುಗಾರನಾಗಿ
ಕಂಗಳ ಪಿಳುಕಿಸುತ್ತ ಪ್ರಶ್ನೆಗಳ ಮೇಲೆ ಪ್ರಶ್ನೆ
ಕೇಳಿಕೊಳುತ್ತಲಿದ್ದೆ......
ಅಹುದು ಕಾದಂಬರಿಗೆ ಕಥಾನಾಯಕ ಯಾರಾಗಬಹುದು
ಉತ್ಪ್ರೇಕ್ಷೆ ಪಡುತಲಿದ್ದೆ ಒಳಗೊಳಗೆ

ಮತ್ತೊಮ್ಮೆ ಹೀಗೆನಿಸಿತು ನನಗೆ
ತ್ಯಾಗಕ್ಕಿಂತ ಬಲಿದಾನ ಶ್ರೇಷ್ಠವೆಂದು
ಸ್ವಾತಂತ್ರ್ಯಕ್ಕಿಂತ ಪ್ರೀತಿ ಮಹತ್ವವೆಂದು.
ಅರಸನಾಗಿ ಆಜ್ಞೆ ಮಾಡುವುದಕ್ಕಿಂತ
ಆಳಾಗಿ ದುಡಿಯುವದೇ ಶ್ರೇಯಸ್ಕರವೆಂದು.

ಹೊತ್ತಿನ ಗೊತ್ತನರಿಯಲು ಮುಗಿಲಿನೆಡೆ ನೋಡಿದಾಗ
ದಿಕ್ಕಿನಿಂದ ದಿಕ್ಕಿಗೆ ಪಥಸಂಚಯನಗೈದ ತಾರೆಗಳು
ಹಾಗೂ ಹಗಲೆಲ್ಲ ಹಾಡಿದ ಪಕ್ಷಿಗಳು ಮತ್ತು ರಾತ್ರಿಯ ಮೌನ
ಕಲ್ಪನಾತೀತವಾಗಿ ಕಣ್ಮುಂದೆ ಸಾಗುತ್ತಲಿತ್ತು.

★ ಅ. ಪಿ. ಮೂರ್ತಿಗೌಡ

# ಕಸದ ತೊಟ್ಟಿ

ಕುರುಕ್ಷೇತ್ರದ ಯುದ್ಧದಲ್ಲಿ
ಅಭಿಮನ್ಯು ದ್ರೋಣರು ಸತ್ತಾಗ
ದುಶ್ಯಾಸನನ ಕರುಳು ಕಿತ್ತೆಸೆದಾಗ
ಭೀಷ್ಮ ಶರಮಂಚದ ಮೇಲೆ ಮಲಗಿದ್ದಾಗ
ಇಡೀ ರಣರಂಗವೇ ಅವರ ಸುತ್ತ ಕವಿದು
ಕಣ್ಣೀರು ಹಾಕಿತ್ತು.
ದೇವಾಸುದೇವತೆಗಳು ಬಿಕ್ಕಿ ಬಿಕ್ಕಿ ಅತ್ತರು.
ಇದು ಪುರಾಣವಾಗಿ ಕಥೆಯಾಗಿ ಕಾವ್ಯವಾಗಿ
ಇತಿಹಾಸವೆಂಬಂತೆ ದಾಖಲಾಯಿತು.
ಆದರೆ ಅದೇ ರಣರಂಗದಲ್ಲಿಯೇ
ಲಕ್ಷೋಪಲಕ್ಷ ಸೈನಿಕರು
ರಕ್ತದ ಹೊಳೆಯಲಿ ಒದ್ದಾಡಿ ಸತ್ತದ್ದು
ಅವರ ಹೆಂಡಿರು ಮಕ್ಕಳು ಪರದೇಶಿಯರಾದುದ್ದಕ್ಕೆ
ಒಂದು ನರಪಿಳ್ಳೆಯೂ ದುಃಖಿಸಲಿಲ್ಲ.
ಇದು ಇತಿಹಾಸದ ಯಾವ ಪುಟದಲ್ಲಿಯೂ ಅಚ್ಚಾಗಲಿಲ್ಲ.

ಸೀತೆ ದ್ರೌಪದಿ ಕುಂತಿಗಾಂಧಾರಿ
ಅಹಲ್ಯ ಮಂಡೋಧರಿಯರೆಲ್ಲ
ಪುರಾಣ ಕಾವ್ಯದ ವಸ್ತುವಾದರು
ಆದರೆ ಹಳ್ಳಿಕೊಳ್ಳಗಳು ತಿರುಗಿ
ಕುಳ್ಳು ಆಯುವ ಹೆಣ್ಣುಗಳಿಗೆ
ಯಾವ ಇತಿಹಾಸವು ಮುಟ್ಟಿ ಮುಸಿನೋಡಲಿಲ್ಲ.

ರಾಜರ ವಂಶಾವಳಿ ಅವರ ಬಿರುದು ಬಾವಲಿ
ಅರಮನೆ ಅಂತಃಪುರ ರಾಜರಾಣಿಯರ ಆಭರಣಗಳ
ನಾಡಿನ ಇತಿಹಾಸಕ್ಕೆ ಹೊಸ ಪರಿಕರಗಳಾದವು.
ಈ ನಾಡಿನಲ್ಲಿ ಬಾಳಲೆ ಹಾಸುಂಡು
ಬೀಸಿ ಒಗೆದದ್ದು ಕಾವ್ಯವಾಯಿತು.

ಅದೇ ಬಾಳಿಲೆಗೆ ನೀರುಣಿಸಿ ಬೆಳಸಿದವ
ಮುಟ್ಟಲಾರದ ವಸ್ತುವಾದ.
ಹಂದಿ ನಾಯಿಗಳು ಇಲ್ಲಿ ದೇವರು
ಅವುಗಳಿಗೆ ಅನ್ನಯಿಕ್ಕಿದವರು ಅಸ್ಪೃಶ್ಯರು.
ತಾಜಮಹಲ್ ಕುತುಬ್ ಮಿನಾರ್
ಪುರಿ ಭುವನೇಶ್ವರಿ ಬೇಲೂರು ಹಳೆಬೀಡು
ಈ ಅದ್ಭುತಗಳು ಕಂಡು ಪೊಗಳಿದವರಿಗೆ ಲೆಕ್ಕವಿಲ್ಲ.
ಇವುಗಳ ಹಿಂದೆ ಹುದಗಿರುವ
ಮೂಕ ಶೋಕ ನೋವಿನಾಳ ಯಾರಿಗೂ ದಕ್ಕಲಿಲ್ಲ.
ಇಲ್ಲಿ ಜನರ ರಕ್ತ ಬೆವರು ಕಣ್ಣೀರೇ
ಮಡುಗಟ್ಟಿ ಕಲ್ಲಾಯಿತು,
ಕಲ್ಲು ಕಲಾಕೃತಿಯಾಗಿ, ಕಲೆಯೇ ಸಂಸ್ಕೃತಿಯಾಗಿ
ಶೋಷಣೆಯ ಇತಿಹಾಸಕ್ಕೆ ಸುವರ್ಣದ ಕಟ್ಟಾಗಿ ಕಂಗೊಳಿಸುತಿವೆ
ಬಲ್ಲವರ ಬದುಕಿನ ಬಡಿವಾರವೆಲ್ಲ ಇತಿಹಾಸವಾಯಿತು.
ಬಡವರ ಕಣ್ಣೀರು ಕತ್ತಲೆಯಲ್ಲಿ ಕರಗಿ ಹೋಯಿತು.
ಇಂಡಿಯಾದ ಇತಿಹಾಸ
ಮತಿಯ ಭಾವ ತುಂಬಿದ ಕಸದ ತೊಟ್ಟಿಯಾಯಿತು.

ಪ್ರಭು ಖಾನ ಪುರೆ

## ಬಂಗಲೆಗಳು

ಬಣ್ಣದ ಬಂಗಲೆಗಳು
ಬಡವರ ಅನ್ನಕಸಿದು
ಹಸಿದವರ ಬೆವರುಬಸಿದು
ಸುಂದರ ಕಂಡಿವೆ
ಉಸಿರಿಲ್ಲದವರ ಗುಡಿಸಲುಗಳು
ಉಳ್ಳವರ ಉಸಿರಿಗೆ ಹಾರ ಬಿದ್ದಿವೆ.
ಇದಕಂಡ ನಮ್ಮ ವಸುದೇವ
ಬೇಜಾರು ಪಟ್ಟ
ಮತ್ತೆ ಮಾಡುವ "ರಪಿ" ಗಾಗಿ ಭರವಸೆ ಇಟ್ಟ

● ಪ್ರೊ. ವಾಸುದೇವ ಸೇಡಂ

# ಹೃದಯಭಾಷೆ

ದಾಸ್ಯದಿ ಕೊಳೆಯಿಸಿ ನಕ್ಕವನೆ
ಹೃದಯ ತುಳಿದು ನಡೆದವನೆ
ಎದೆಯ ಹಾಲುಂಡ ನೀ
ತೀಟೆಯ ತಿಕ್ಕಲುತನದಲಿ
ಆದರ್ಶಗಳ ಕೊಂಡಿಯೊಳಗೆ ಬಂಧಿಸಿ
ಚಂದ್ರಿಕೆಯ ಚೆಲುವನಾರೋಪಿಸಿ
ಚಕೋರವಾಗಿ ಚಕ್ಕಂದದಲಿ ವಿಹರಿಸಿ
ನಮ್ಮೊಡಲನೆ ಇರಿದವ
ಅಲ್ಲಿ ನಿನ್ನನ್ನೇ ನೀ ನಾಟಿ ಮಾಡಿದವ
ಕಾವು ತೀರಿದಾಗ ಬಿಸಿಲಾದ ನಮ್ಮ ಹಾಸಿಗೆಯ ಕಂಡು
ಹೇಸಿಗೆಯ ಪಡುವ ನಿಷ್ಕರುಣಿ ನಿನಗೆ
ತಿಳಿದೀತು ಹೇಗೆ ನಮ್ಮ ಹೃದಯ ಭಾಷೆ
ಜೀವಕ್ಕೆ ಜೀವವ ಕೊಟ್ಟ ನಮ್ಮ ಹೆಣ್ತನವ
ನಿರ್ಜೀವ ಹಣ್ಣಿನಂತೆ –
ಪ್ರದರ್ಶನಕ್ಕಿಟ್ಟು ಮಾರಾಟಕಿಟ್ಟು ಪಣಕಿಟ್ಟು
ನೀ ಮೆರೆದದ್ದು ಕತೆಯಾಗಿಲ್ಲವೆ ಚರಿತ್ರೆಯುದ್ದಕ್ಕೂ ?
ಮುಟ್ಟದಿದ್ದರೂ ಮೈಲಿಗೆಯಾಗಿಕಂಡ ಶಲ್ಯ.
ಗೆಲುವನ್ನೆ ಹೆಮ್ಮೆಯಾಗಿ ಕಂಡ ನಿರ್ಹೃದಯಿ ಭೀಷ್ಮ
ನಿರಾಶೆಯ ಬೆಂಕಿಗೆ ಮನೋವೇದನೆಯ ಅಗ್ನಿ ಕುಂಡಕೆ ದೂಡಿ
ವೀರತನದ ಶೂರಧೀರ ಆಟ ಆಡಿದ್ದು ಯಾರು ?
ಮಾತೆಯೆನ್ನುತ ಮಾಯೆಯೆಂದವನು
ಯುಗಯುಗಗಳಿಂದಲೂ ಉಪೇಕ್ಷಿಸಿದವನು
ಬೇರು ನೆಲದ ಸಾರವ ಹೀರಿಕೊಂಡೆ ಮರವು ಬೆಳೆವಂತೆ
ಕಾಣದ ಕೈಯಾಗಿ ದುಡಿದೆ ನಾ ನಿನಗಾಗಿ ಇದು ನೀ ಬಲ್ಲೆಯಾ?
ಫಲ ನೀ ನೀಡಿದ್ದು ನಾ ಪಡೆದದ್ದು
ದೀನೆ-ದಲಿತೆ-ದಾಸಿ-ದರಿದ್ರೆ-ಅಬಲೆ
ಬಿರುದಾವಳಿಗಳ ಸರ ಸರಮಾಲೆ ! ! !
ನಾವು ತುಳಿದ ಮುಳ್ಳುಗಳಗುಂಟ ಹರಿದ ನೆತ್ತರಕೆ
ಶಿಲೆ ಕಣ್ಣೀರು ಸುರಿಸೀತು–ಆದರು
ಅರ್ಥವಾಗದು ನಿನಗೆ ನಮ್ಮ ಹೃದಯಭಾಷೆ

● ಡಿ. ಜಿ. ಬಳೂರಗಿ

# " ನಾನು ನನ್ನವನು "

ನಾನು ಯಾರವನೂ ಅಲ್ಲ
ನನ್ನವನು.
ನನ್ನ ನಿನ್ನೆ
ಇಂದು
ನಾಳೆಗಳು ನನ್ನುವೆ.

ಮುಂಜಾವಿನ ಶುಭ್ರತೆ, ಶಾಂತತೆ
ಮಧ್ಯಾಹ್ನದ ಉರಿ, ಬಿಸಿಲು
ಸಾಯಂಕಾಲದ ಕೆಂಪಾಕಾಶ
ರಾತ್ರಿಯ ಕರಿಗತ್ತಲು
ನರ್ತಿಸುವ ನಕ್ಷತ್ರ
ಚೆಲ್ಲಾಟಾಡುವ ಚಂದಿರ
ಎಲ್ಲವೂ ನನ್ನುವೇ.

ನಿನ್ನೆಯ ಬುನಾದಿ ಮೇಲೆ
ಇಂದಿನ ಕಲ್ಲು ಮಣ್ಣಿಂದ
ನಾಳಿನ ನನ್ನ ಮನೆ
ನಾನೀಗ ಕಟ್ಟಬೇಕು.
ಯಾಕೆಂದರೆ
ನಾನು, ಯಾರವನೂ ಅಲ್ಲ
ನನ್ನವನೆ.

★ ವೀರಭದ್ರ ಕೌದಿ
ಪ್ರೇರಣೆ : ಡಾ॥ ಜಗದೀಶ ಗುಪ್ತರ
" ಸುಬಹ ಕೆ- ದೋ ಗೀತ "

# ನರಳುತ್ತಾಳೆ ನನ್ನ ಕವಿತೆ

" ನೀನು ನಕ್ಕರೆ ಸ್ವರ್ಗವೇ ಸುರಿದಂತೆ " ಎಂದ
ಗೆಳೆಯನಮಾತು :
" ನೀನು ಸಿಕ್ಕರೆ ತಾರೆಯು ಮುರಿದು ತರುವೆ '' ನೆಂದ
ಪಾರ್ಕಿನ ನಲ್ಲನ ನುಡಿ ;
ಕೇಳಿ; ಭ್ರಮೆಹರಿದಾಗ ನರಳುತ್ತಾಳೆ ನನ್ನ ಕವಿತೆ.

ಸಮಾಜವಾದಿಗಳು ಬಾರಿನಲಿ ಬೀರು ಹೀರಿ
ಹಾರಗಳ ತೋಳಿಗೇರಿಸಿ
ಕಾರುಗಳಲ್ಲಿ ಕುಳಿತು
ಬಟಾಬಯಲಾದಾಗ
ನರಳುತ್ತಾಳೆ ನನ್ನ ಕವಿತೆ.

ಬಂಡಾಯಗಾರರು ಕೆಂಡದಂತಹ ಕವಿತೆ ಬರೆದು
ಉಂಡುಂಡು ಸಂಗಡಿಗರ ಮಗ್ಗಲು
ಮೀಟಿದಾಗ
ನರಳುತ್ತಾಳೆ ನನ್ನ ಕವಿತೆ.

ಇಟ್ಟಿಗೆ ಭಟ್ಟಿಯಲಿ
ಮಣ್ಣು ಹೊತ್ತು ಸುಟ್ಟು ಸೊಟ್ಟಗಾದಾಗ
ಅಧ್ವಾನದವರು " ಇಟ್ಟಿಗೆ ಪವಿತ್ರ "
ಎಂದೊಡನೆ "ಎಂಥ ವಿಚಿತ್ರ" ಎಂದು ನರಳುತ್ತಾಳೆ ನನ್ನಕವಿತೆ.

ಕಲಿತ ಕರ್ಮವ ನೀಗಲು
ದುಗ್ಗಾಣಿ ದುಡ್ಡಿಗಾಗಿ ದುಡಿಯಲು
ನಮ್ಮೂರ ಐ. ಬಿ. ಟಿ. ಬಿ, ಗಳ
ಕಾಟು ದಿಂಬುಗಳ ನಡುವೆ
ಕೀರಲು ಕೀರಲಾಗಿ ನರಳುತ್ತಾಳೆ ನನ್ನ ಕವಿತೆ

● ರೈತಸುತ ಡಿ. ಎಂ. ನದಾಫ ಅಫಜಲ್‌ಪುರ

# ಕ್ಷೇಮವಾಗಿದ್ದೀರಾ ಸ್ವಾಮಿ ?

ಪಾಕಿಂಗು ಹೊರಟಾಗ ಭೆಟ್ಟಿಯಾದ ರಾಮಾಯಣದ ರಾವಣ
ಏನುಸ್ವಾಮಿ ಎಲ್ಲಾ ಕ್ಷೇಮವೆ ? ಮಾಡಿದೆ ನಾನು ಪಾರಾಯಣ

ಎಲ್ಲಿಯದು ಮಹಾರಾಯು ಗೋಳು ಆಗಿದ್ದೇನೆ ಹೈರಾಣ !
ಕಾಲೇಜುಗಳಲ್ಲೆಲ್ಲ ಸೇರಿ ಬಿಟ್ಟು ನಡೆಸಿದ್ದಾರೆ ಸೀತಾಯಣ
ಮಾರ್ಕೆಟಿಗೆ ಹೊರಟಾಗ ಭೆಟ್ಟಿಯಾದ ಭಾರತದ ದುಶ್ಯಾಸನ
ಏನುಸ್ವಾಮಿ ಎಲ್ಲಾ ಕ್ಷೇಮವೆ ? ಮಾಡಿದೆನಾನು ಅನುಪಾನ!
ಏನು ಹೇಳಲಿ ನನ್ನಯುಬಾಳು ಕೇಳುವವರಿಲ್ಲ ನನ್ನಯುಗೋಳು
ಹೆಂಗಸರೇ ಹೆಂಗಸರ ಸೀರೆಸೆಳೆದು ಮಾಡಿದ್ದಾರೆ ಹೆಸರು ಹಾಳು

ಕಾಲೇಜಿಗೆ ಹೊರಟಾಗ ಭೆಟ್ಟಿಯಾದ ಭಾರೀ ಮೀಸೆಯ ಕೀಚಕ
ಏನುಸ್ವಾಮಿ ಎಲ್ಲಾ ಕ್ಷೇಮವೆ ? ಕೇಳಿದೆ ನಾನು ಅಚಾನಕ!
ಎಲ್ಲಿಯ ಕ್ಷೇಮ ಏನುಕತೆ ಮಾಡಿದ್ದೆ ಒಂದೇ ಪಾತಕ
ವಿಧಾನ ಸಭೆಯೊಳಗೆ ನಡೆದಿದೆ ನಿತ್ಯ ನನ್ನ ಕಾಯಕ

ಹೊರಗೆ ಹೊರಟಾಗ ಭೆಟ್ಟಿಯಾದ ಮೋಹಿನಿಯು ಭಸ್ಮಾಸುರ
ಏನುಸ್ವಾಮಿ ಎಲ್ಲಾ ಕ್ಷೇಮವೆ ? ಕೇಳಿದೆನಾನು ಭರಪೂರ
ನನ್ನನ್ನೇ ನಾನು ಸುಟ್ಟುಕೊಂಡೆ ತಲೆಮೇಲೆ ಕೈಯಹೊತ್ತು
ಈದಿನ ಖ್ಯಾತ ಅಭಿಯಂತರರಿಂದ ಸಿಮೆಂಟು-ಹಣ-ಕಬ್ಬಿಣಕ್ಕೆ ಆಪತ್ತು

ಲೈಬ್ರರಿಗೆ ಹೊರಟಾಗ ಭೆಟ್ಟಿಯಾದ ಏಕೋ ಎಚ್ಚರಾದ ಕುಂಭಕರ್ಣ
ಏನುಸ್ವಾಮಿ ಎಲ್ಲಾ ಕ್ಷೇಮವೆ ? ನಿದ್ದೆ ಆಯಿತೇ ಸಂಪೂರ್ಣ
ಏನು ಹೇಳಲಿ ನನ್ನ ಕತೆಯು ಕಸಿದುಕೊಂಡಿದ್ದಾರೆ ನನ್ನ ನಿದ್ದೆಯ
ಮಾಸ್ತರರೆನ್ನುತ್ತಾರೆ ಈಗ ಅವರಿಗೆ ನಿನಗಿಲ್ಲವೆ ಅವರ ಪರಿಚಯ

ಸಿನಿಮಾಕ್ಕೆ ಹೊರಟಾಗ ಭೇಟಿಯಾದಳು ದೇವಲೋಕದ ರಂಭೆ
ಏನು ಸ್ವಾಮಿನೀ ಎಲ್ಲಾ ಕ್ಷೇಮವೆ ? ಹೇಳಿ ರಂಜಿಸು ದಾಳಿಂಬೆ
ಅಯ್ಯೋ ನಾನು ಮುದಿಯಾಗಿದ್ದೇನೆ ಈಗ ಹಳಬಳನ್ನು ಮಾತನಾಡಿಸುವರೇ ?
ರಾಜಕಾರಣಿಗಳೇ ದಂಧೆನಡೆಸಿರುವಾಗ ಜನ ನನ್ನ ಒಲ್ಲೈಸುವರೆ ?

ಮನೆಗೆ ಹೊರಟಾಗ ಭೆಟ್ಟಿಯಾದ ಸುಪ್ರಸಿದ್ದ ಯಮರಾಜ
ಏನುಸ್ವಾಮಿ ಎಲ್ಲಾ ಕ್ಷೇಮವೇ ? ಪಾಶಧಾರೀ ಭೀತಿತೇಜ
ಯಾರು ಕೇಳುತ್ತಾರೆ ನನ್ನ ಈಗ ಕಂಡು ಹಾಕುವರು ಥರಥರದ ಸೋಗು
ಇಂದಿನ ಸಜ್ಜನರೆಲ್ಲಾ ನನ್ನ ಸಹೋದರರೇ ಸುಮ್ಮನೆ ಕವಿತೆ ಓದಿ ಮನೆಗೆಹೋಗು

– ಪ್ರೊ. ರವೀಂದ್ರ ಕರ್ಜಗಿ
ಎನ್. ವಿ. ಕಾಲೇಜು ಗುಲಬರ್ಗಾ

---

# ನಿನ್ನ ಈ ಮೌನ

ನಿನ್ನ ಈ ಮೌನ
ನಿನ್ನ ಮೂಕ ರೋದನ
ಅಮವಾಸೆ ಕತ್ತಲಿನಂತೆ
ಪ್ರಯೋಗ ಪಥದಲ್ಲಿ
ಚೆಲ್ಲಾ ಪಿಲ್ಲಿಯಾಗಿ ಬಿದ್ದ
ಕಚ್ಚಾ ಸಾಮಗ್ರಿಯಂತೆ.
ವೇದನೆ ಮರೆತು
ಶೋಧಿಸುವುದಿದೆ ಸತ್ಯ
ಅದಕ್ಕಾಗಿ ತಾಳು ಏಳು
ನಡೆವರೆಡಹುವುದ
ಚಲನ ಶೀಲರು ಸ್ಥಗಿತವಾಗುವುದ
ಕಂಡು ನಗುವವರು ನಗಲಿ
ಅದು ಲೋಕ ರೂಢಿ !
ಕಡ್ಡಿ ಕೊರೆದು ಬಿಡು
ಬೀಳಲಿ ಪ್ರಕಾಶ ಒಮ್ಮೆ
ಕವಿದ ಕತ್ತಲೆ ದೂರಾಗಿ
ತಾಳಲಿ ಹೊಸ ಹೊಸ ರೂಪು
ಸೃಜನ ಶೀಲತೆಯ ಹೊಸ ಹೊಸ ಛಾಪು
ಸಂಶೋಧನೆಯ ಮಾರ್ಗ
ಸಫಲವಾಗಿ ನೀನಾದರೆ ಕ್ಯೂರಿ
ನವೋಲ್ಲಾಸದ ಜೀವ ಝರಿ
ಆಗ ನೀ ಮೌನವಾಗುವುದಿಲ್ಲ
ಮೂಕ ರೋದನ ಗೈಯ್ಯುವುದಿಲ್ಲ

 ಕೆರಮಗಿ ಸುರೇಂದ್ರ ಕುಮಾರ

# ‘ಹೊಸದಿಕ್ಕು’ ಗೆ ಬಂದ ಪ್ರತಿಕ್ರಿಯೆಗಳು

ಪ್ರೀತಿಯ ತಿಮ್ಮಯ್ಯ ಪೂರ್ಣಿಯವರಿಗೆ ವಂದನೆಗಳು, ಹೊಸದಿಕ್ಕು ಬಂದು ಬಹಳ ದಿನಗಳಾದವು. ಕೂಡಲೇ ಬರೆಯಲು ಆಗಲಿಲ್ಲ. ಕ್ಷಮೆ ಕೇಳುವೆ. ‘ಹೊಸದಿಕ್ಕು’ ನಮಗೆ ಅವಶ್ಯಬೇಕು. ಇದನ್ನು ಉಳಿಸಿ ಬೆಳೆಸಲೇಬೇಕು. ನಿಮ್ಮ ಮತ್ತು ಗೆಳೆಯರ ಸಾಹಸ ನನಗೆ ಮೆಚ್ಚಿಗೆಯಾಗಿದೆ. ನನ್ನನ್ನು ನಿಮ್ಮ ಬಳಗದಲ್ಲಿ ಸೇರಿಸಿಕೊಳ್ಳಿರಿ; ನಾನು ನಿಮ್ಮವನೇ. ಮುಂದಿನ ಸಂಚಿಕೆಗಾಗಿ ‘ಗಜಲ್’ ಕಳಿಸುವೆ. ಸದ್ಯ ಬಿಡುವಿಲ್ಲ. ಶ್ರೀ ಕರದಳ್ಳಿ, ಹೊಸ್ಕಲ್, ಸೂಗಯ್ಯಾ ಮುಂತಾದ ಸ್ನೇಹಿತರಿಗೆ ನನ್ನ ನ॥ ತಿಳಿಸಿರಿ.

— ತಮ್ಮ – **ಶಾಂತರಸ ರಾಯಚೂರು**

ಗೆಳೆಯರಾದ ಶ್ರೀ ಹೊಸ್ಕಲ್ ಅವರಿಗೆ. ಹೊಸದಿಕ್ಕು ಅತ್ಯಂತ ಯಶಸ್ವಿಯಾಗಿ ಹೊರ ಬಂದಿದೆ ಹೀಗೆಯೇ ಬರಲಿ.

— **ಡಾ॥ ವೀರಣ್ಣ ದಂಡೆ** ( ಕವಿಮಾರ್ಗ ) ಕಲಬುರ್ಗಿ

ಪ್ರಿಯ ಹೊಸ್ಕಲ್, ನೀವು ವಿಶ್ವಾಸವಿಟ್ಟು ಕಳಿಸಿದ “ಹೊಸದಿಕ್ಕು” ತಲುಪಿತು. ತುಂಬಾ ಥ್ಯಾಂಕ್ಸ. ನಿಮ್ಮ ಲಲಿತ ಪ್ರಬಂಧವನ್ನು ಮೊದಲು ಓದಿದೆ. ನಿಮ್ಮ ಕಡೆಯ ಜನರ ಒರಟುತನದ ಬಗ್ಗೆ ಮುಜುಗರವು; ಮೈಸೂರ ಕಡೆಯವರ “ ಸೂಕ್ಷ್ಮಜ್ಞರ” ಬಗ್ಗೆ ಕಾಳಜಿಯು ಇದ್ದರೆ ಅದು ಬೇಕಾಗಿಲ್ಲ. ಈ ಸ್ವಭಾವಗಳು ನಮ್ಮ ಆರ್ಥಿಕ ವ್ಯತ್ಯಾಸದಿಂದಲೂ, ಭೌಗೋಲಿಕ ಪರಿಸರದಿಂದಲೂ ಬಂದಂಥವು ತಾನೆ ? ಮೈಸೂರ ಕಡೆಯವರ ಈ ಸೂಕ್ಷ್ಮಜ್ಞತೆಯೇ ಇತಿಹಾಸದಲ್ಲಿ ವಸಾಹತುಶಾಹಿಗಳ ವಿರುದ್ಧ ಹೋರಾಟವನ್ನು ಪ್ರೇರಿಸದೇ. ರಾಜಿ ಮಾಡಿಸಿತ್ತು. ನಿಮ್ಮ ಜನರ ಒರಟುತನವು ಸಿಡಿದೆದ್ದ ಪ್ರತಿಭಟನೆಯಾಗಿತ್ತು. ಉಳಿದ ಲೇಖನಗಳನ್ನು ಇನ್ನೂ ಓದಿಲ್ಲ. ಓದಿ ಬರೆಯುತ್ತೇನೆ. ದಯವಿಟ್ಟು ಪತ್ರಿಕೆ ಕಳಿಸಿ. ಚಂದಾ ತಿಳಿಸಿ, ನಮಸ್ಕಾರಗಳು.

— ನಿಮ್ಮ ಸ್ನೇಹಿತ **ಡಾ॥ ರಹಮತ್ ತರೀಕೆರೆ ಶಿವಮೊಗ್ಗ**

ಪ್ರಿಯ ಶ್ರೀ ಹೊಸ್ಕಲ್ ಶ್ರೀ ಪೂರ್ಣಿಯವರ ಸಂಪಾದಕತ್ವದ ‘ಹೊಸದಿಕ್ಕು’ ಕೈ ಸೇರಿದೆ. ಪತ್ರಿಕೆಯ ಧ್ಯೇಯ ಯೋಜನೆ ಮೆಚ್ಚುವಂತಹದು. ಈ ಭಾಗದ ಲೇಖಕರಿಗೆ ಆದ್ಯತೆ ನೀಡುವ ಉದ್ದೇಶ ಒಳ್ಳೆಯದು. ಯಾವ್ಹೊಂದು ಗುಂಪಿನ ಲೇಖ

ವಾಗದಂತೆ ಪತ್ರಿಕೆಯನ್ನು ಹತ್ತು ವರ್ಷಗಳಷ್ಟಾದರು ನಡೆಸಿದರೆ ಈ ಭಾಗದ ಸಾಹಿತ್ಯ-ಸಾಂಸ್ಕೃತಿಕ ಕ್ಷೇತ್ರಕ್ಕೆ 'ಹೊಸದಿಕ್ಕು' ಶ್ರೇಷ್ಠ ಕಾಣಿಕೆ ನೀಡಿದಂತೆಯೇ ಸರಿ. ಅದು ನಿಮ್ಮಿಂದ ಸಾಧ್ಯವಾಗಲಿ. ನಿಮಗೆ ಒಪ್ಪಿಗೆ ಇದ್ದರೆ ಸಂಶೋಧನ ವ್ಯಾಸಂಗಕ್ಕೆ ವಿನಿಮಯವಾಗಿ ಪತ್ರಿಕೆಯನ್ನು ಕಳಿಸಿರಿ. ಈ ಕುರಿತು ಒಂದು ಸಾಲು ಬರೆಯಿರಿ, ನಿಮ್ಮ ಗೆಳೆಯರಿಗೆ ಪುರ್ಲೆಯವರಿಗೆ. ಅಭಿನಂದನೆಗಳು.

— **ಡಾ॥ ಸಂಗನೋಶ ಸವದತ್ತಿಮಠ ಗುಲಬರ್ಗಾ.**

ತರುಣ ಮಿತ್ರ ಹೊನ್ಕಲ್, ಹೊಸದಿಕ್ಕಿನೊಂದಿಗೆ ದಿಟ್ಟ ಹೆಜ್ಜೆ ನೀವು ಗೆಳೆಯರೆಲ್ಲಾ ಇಟ್ಟಿದ್ದೀರಿ, ನೀವು ಸ್ನೇಹಿತರೆಲ್ಲ ಯಶಸ್ವಿಯಾಗಿ ಈ ಕೆಲಸ ಮಾಡುತ್ತೀರೆಂಬ ವಿಶ್ವಾಸ ನನಗಿದೆ. ನಾನು ಪತ್ರಿಕೆಗೆ ಚಂದಾದಾರನಾಗಲು ಬಯಸುವೆ. ಕಲಬುರ್ಗಿಗೆ ಬಂದಾಗ ಕಾಣಿರಿ ಹಣಕೊಡುತ್ತೇನೆ. ನಿಮಗೆಲ್ಲಾ ಶುಭ ಹಾರೈಕೆಗಳು.

— **ಎಂ. ಸಿ. ಅಂಚಿನ ಗುಲಬರ್ಗಾ**

ಪ್ರೀತಿಯ ಹೊನ್ಕಲ್ ಹೊಸದಿಕ್ಕು ಚೆನ್ನಾಗಿ ಬಂದಿದೆ. ಹೊಗಳಿಕೆಯ ಮಹಾಪುರವೇ ಹರಿದು ಬರುತ್ತದೆ, ಬಾಂದಿರಬೇಕು. ಆದೇರೀತಿ ಚಂದಾಹಣ ಬಂದಾಗ ಪತ್ರಿಕೆ ನಿಲ್ಲುತ್ತದೆ. ಯಶಸ್ವಿಯಾಗಿರಿ.

— **ಆರ್. ಜಿ. ಹಳ್ಳಿ ನಾಗರಾಜ**

ಪ್ರಿಯರೆ ನಿಮ್ಮ ಹಾಗು ಗೆಳೆಯರ ಶ್ರಮ ಸಾರ್ಥಕಗೊಂಡಂತೆ ಹೊಸದಿಕ್ಕು ವಿನ ಒಳ ಮತ್ತು ಹೊರ ಹೂರಣವೆಲ್ಲಾ ತುಂಬಾ ಚೆನ್ನಾಗಿ ಬಂದಿದೆ. ಈ ಸಾಹಸದಲ್ಲಿ ನೀವು ಯಶಸ್ವಿಯಾಗಬಲ್ಲಿರೆಂಬ ನಂಬಿಕೆ ನನಗಿದೆ ಅಭಿನಂದನೆಗಳು...

— **ಅಲ್ಲಮಪ್ರಭು ಬೆಟ್ಟದೂರ ಕೊಪ್ಪಳ**

ಪ್ರಿಯ ಮಿತ್ರ ಹೊನ್ಕಲ್ ಅವರಿಗೆ, 'ಹೊಸದಿಕ್ಕು' ನಮ್ಮ ನಿರೀಕ್ಷೆ ಮೀರಿ ಚೆನ್ನಾಗಿ ಬಂದಿದೆ. ವಸ್ತುನಿಷ್ಠ ಅಂತರಂಗದ ಮಾತು ಹಿಡಿಸಿತು. ಪತ್ರಿಕೆ ನಮ್ಮದೆನಿಸುತ್ತದೆ. ಚಂದಾ ಹಣ ಕಳಿಸಿಕೊಡುವೆ. ಪತ್ರಿಕೆ ಕಳಿಸುತ್ತಾ ಇರಿ. ಗೆಳೆಯರಾದ ಶ್ರೀ ಕರದಳ್ಳಿಯವರಿಗೆ ವಂದನೆಗಳು.

— **ವಿಠ್ಠಪ್ಪ ಗೋರಂಟ್ಲಿ ಕೊಪ್ಪಳ**

ಪ್ರಿಯ ಹೊಸ್ಕಲ್‌ರವರಿಗೆ, ವಂದನೆಗಳು. 'ಹೊಸದಿಕ್ಕು' ತಲುಪಿತು. ನಿಮ್ಮ ಹಾಗು ಗೆಳೆಯರ ಈ ಸಾಹಸಕ್ಕೆ ನನ್ನ ಬೆಂಬಲವಿದೆ. ನಿಮ್ಮ ಭಾಗದಿಂದ ಆಗಲೇಬೇಕಾಗಿದ್ದ ಒಂದು ಒಳ್ಳೆಯ ಕೆಲಸ ಮಾಡಿದ್ದೀರಿ, ನಿಮ್ಮ ಭಾಗದ ವ್ಯವಸ್ಥೆಯನ್ನು ಕುರಿತು ಬರೆದ ನಿಮ್ಮ ಚೇತೋಹಾರಿ ಲಲಿತ ಪ್ರಬಂಧ ಚೆನ್ನಾಗಿದೆ ಪತ್ರಿಕೆ ಕಳಿಸುತ್ತಲಿರಿ.

— ಗೋ. ರು. ಚೆನ್ನಬಸಪ್ಪ ಬೆಂಗಳೂರು

ಪ್ರೀತಿಯ ಹೊಸ್ಕಲ್; ಹೊಸದಿಕ್ಕು ತಲುಪಿದೆ. ನಿಮ್ಮ ಭಾಗದ ಹಾಗು ಬಿಜಾಪುರ ಜಿಲ್ಲೆಯು ಸೇರಿ ಲೇಖಕರಿಗೆ ಅವಕಾಶ ದೊರಕಿಸುವ ನಿಟ್ಟಿನಲ್ಲಿ ಹೊರಬಂದ ನಿಮ್ಮ ಪತ್ರಿಕೆ ಸಹಜವಾಗೇ ನಿರೀಕ್ಷೆ ಹುಟ್ಟಿಸಿದೆ. ಅಖಂಡ ಕರ್ನಾಟಕವೆಂದರೆ ದಕ್ಷಿಣದಲ್ಲಿ ಬೆಂಗಳೂರ ಉತ್ತರದಲ್ಲಿ ಧಾರವಾಡ ಬಿಟ್ಟು ನಮ್ಮ ಸಾಹಿತಿಗಳು ಮತ್ತೆಲ್ಲೂ ಯೋಚಿಸುವದೇ ಇಲ್ಲ. ಸಾಹಿತ್ಯಿಕ ಹಾಗೂ ಸಾಂಸ್ಕೃತಿಕ ವಾದ ಈ ಅಸಮತೋಲನವನ್ನು 'ಹೊಸದಿಕ್ಕು' ಹೊಡೆದೋಡಿಸಬೇಕಾಗಿದೆ. ಈ ಭಾಗದ ಲೇಖಕರನ್ನು ತನ್ನ ತೆಕ್ಕೆಗೆ ತಗೊಂಡು ಬೆಳೆಸಬೇಕಾಗಿದೆ.

— ನಿಮ್ಮವ, ಅಂಬಾದಾಸವಡೆ ಬಾಗಲಕೋಟೆ

ಪ್ರಿಯ ಗೆಳೆಯ ಹೊಸ್ಕಲ್ 'ಹೊಸದಿಕ್ಕು' ಆಕರ್ಷಕವಾಗಿದೆ. ಇದೇ ಉತ್ಸಾಹ ಮುಂದುವರೆಯಲಿ. ಲೇಖನಗಳ ಗುಣವಂಟ್ಟದಬಗ್ಗೆ (ಮುಖ್ಯವಾಗಿ-ಕಾವ್ಯ) ವಿಶೇಷ ಗಮನವಿರಲಿ. ಒಂದು ವರ್ಷದ ನಂತರವೇ ಸಾಹಿತ್ಯಸ್ಪರ್ಧೆ ಏರ್ಪಡಿಸಿರಿ. ಕನ್ನಡ ಅಂಕಿ ಬಳಸಿರಿ. ಜಾಹಿರಾತು ಒಂದು ಸಂಚಿಕೆಗೆ ನಾಲ್ಕಾರು ಪುಟಕ್ಕಿಂತ ಹೆಚ್ಚಿಗೆ ಬೇಡ.

— ಚಂಪಾ, ಧಾರವಾಡ

ಆತ್ಮೀಯರಿಗೆ ವಂದನೆಗಳು. ರಾಜಶೇಖರ ಪಾಟೀಲರ "ಕ್ರಾಂತಿ" ಕಥೆ ಸರಳವಾಗಿ ಓದಿಕೊಂಡು ಹೋಗುತ್ತದೆ. ಇನ್ನುಳಿದವು ಕೂಡಾ ಉತ್ತಮ ಆಯ್ಕೆ. ನಿಮ್ಮ ತುಂಬಿದ ಬಸುರಿ ತಲಿಮ್ಯಾಲ ಭಾಷೆಯ ಶೈಲಿ ನನಗೆ ಮೆಚ್ಚುಗೆಯಾಗುತ್ತದೆ. ಕವನದಲ್ಲೂ ಇದೇ ಭಾಷೆಯನ್ನು ಕಂಡಿದ್ದೇನೆ. ಮೊನ್ನೆ 'ದಾವಣಗೆರೆಗೆ ಪುಸ್ತಕ ಜಾಥಾ' ಕ್ಕೆ ಬಂದಿದ್ದಿರಂತೆ ನಾನು ಊರಲ್ಲಿ ಇರಲಿಲ್ಲ. ಪತ್ರಿಕೆಯ ಅಂತರಂಗವನ್ನು ನಮ್ಮ ಅಂತರಂಗಕ್ಕೆ ಆಪ್ಯಾಯಮಾನವಾಗಿ ಮುಟ್ಟಿಸಿದ್ದೀರಿ. ಇಲ್ಲಿ

ನಮ್ಮ ಅನುಭವವು ಕೂಡಾ ಇದೆ, ಪತ್ರಿಕೆ ನಡೆಸುವದು ಸಾಮಾನ್ಯದ ಕೆಲಸವಲ್ಲ. ನಿಮ್ಮ ಸಾಹಸಗಳಿಗೆ ನಮ್ಮ "ಪ್ರಜಾ ಕೂಗು" ಬಳಗದ ಸಂಪಾದಕರ ಬೆಂಬಲ ಪ್ರೀತಿ ಇದೆ.

— ಶ್ರೀ ರಾಜು ದಾವಣಗೆರೆ

ಹೀಗೆ ಮೆಚ್ಚುಗೆಯು-ಸಲಹೆಯು-ಅಭಿನಂದನೆಯು ನೂರಾರು ಪತ್ರಗಳು ಬಂದಿವೆ. ಬರುತ್ತಲೆ ಇವೆ. ಸ್ಥಳಾಭಾವದಿಂದ ಪ್ರಕಟಿಸುತ್ತಿಲ್ಲ ಅಷ್ಟೆ. ದಯವಿಟ್ಟು ಉಳಿದವರು ಅನ್ಯಥಾ ಭಾವಿಸಬಾರದು. ನಿಮ್ಮ ಮಾತುಗಳು ನಮ್ಮ ಹೃದಯದಲ್ಲಿ ಪ್ರಕಟಗೊಂಡಿವೆ.

— ಸಂಪಾದಕ

# ಸಾದರ ಸ್ವೀಕಾರಕ್ಕೆ ಬಂದ ಪುಸ್ತಕಗಳು

ಈ ಸಂಚಿಕೆಯಿಂದ 'ಹೊಸದಿಕ್ಕು' ವಿನಲ್ಲಿ ಸಾದರ ಸ್ವೀಕಾರಕ್ಕೆ ಪುಸ್ತಕಗಳನ್ನು ಪಡೆದು ಈ ಅಂಕಣದ ಮಿತಿಯಲ್ಲಿ ಕೃತಿ ವಿಮರ್ಶೆ ಮಾಡಲಾಗುವದು. ಲೇಖಕರು ತಮ್ಮ ಸಂಕಲನಗಳ ಎರಡು ಪ್ರತಿಗಳನ್ನು ಕಳಿಸಲು ಕೋರಲಾಗಿದೆ.

೧ ಚಿಂತನೆಯ ಹಾದಿಯಲ್ಲಿ ;- ಕಲಬುರ್ಗಿಯ ಕವಿರಾಜ ಮಾರ್ಗ ಪ್ರಕಾಶನದ ಮೂಲಕ ಪ್ರಕಟಿತಗೊಂಡ ಕೃತಿ. ಬೆಲೆ-೨೦ ರೂ. ಮಾಗಿದ ಮನಸ್ಸು ಹಾಗು ವಯಸ್ಸಿನೊಂದಿಗೆ ಕ್ರಿಯಾಶೀಲತೆಯನ್ನು ಉಳಿಸಿಕೊಂಡು ಚಿಂತನೆಯ ಹಾದಿಯಲ್ಲಿ ಹೊರಟ ಖ್ಯಾತ ಶಿಶು ಕವಿ ಎ. ಕೆ. ರಾಮೇಶ್ವರರ ಮೂವತ್ತಾರು ಚಿಂತನಗಳಿಲ್ಲಿವೆ. ಪ್ರಕಟವಾದ ವರ್ಷದಲ್ಲಿ ಮರು ಮುದ್ರಣ ಕಾಣುತ್ತಿರುವದೇ ಈ ಸಂಕಲನದ ಬರಹಗಳ ಮೌಲ್ಯಮಾಪನ ನೀಡಬಲ್ಲದು.

೨ ಕಾವ್ಯಕುಸುಮ :- ಬಾಪ್ರ ವಿಚಾರ ವೇದಿಕೆ ಹೂಲಗೇರಿ (ರಾಯಚೂರು ಜಿಲ್ಲೆ) ಪ್ರಕಾಶನದಿಂದ ಹೊರಬಂದ ೬೭ ಕವನ, ಹನಿಗವನಗಳುಳ್ಳ ಸಂಕಲನವಿದು. ಸಾಹಿತ್ಯದ ಬಗೆಗಿನ ಅಪಾರ ಆಸಕ್ತಿಯೇ ಈ ಕೃತಿ ಹೊರಬರಲು ಕಾರಣವಾದಂತಿದೆ. ಉತ್ಸಾಹಿ ತರುಣರಾದ ಕಾಶಿನಾಥ ಹಂಪ್ರಾಳಕರ್ ಹಾಗೂ ಬಾಪ್ರ ವಿಚಾರ ವೇದಿಕೆಯ ಸದಸ್ಯರ ಕ್ರಿಯಾಶೀಲತೆಗೆ ಈ ಕಾವ್ಯ ಕುಸುಮ ಸಾಕ್ಷಿಯಾಗಿದೆ. ಇಲ್ಲಿ ಗಟ್ಟಿಯಾಗಿ ಬೆಳದ-ಬೆಳೆಯಬಲ್ಲ ಯುವ ಪ್ರತಿಭೆಗಳು ಕಾಣಸಿಗುತ್ತವೆ.

"ಹೊಸ ದಿಕ್ಕು" ಪತ್ರಿಕೆಗೆ ಹಾರ್ದಿಕ ಶುಭಾಶಂಸುಗಳು

"ಹೊಸದಿಕ್ಕು" ಪ್ರಥಮ ಸಂಚಿಕೆ
ಚೆನ್ನಾಗಿ ಹೊರಬಂದಿದೆ. ಈ ಭಾಗದ
ಸಾಹಿತ್ಯ ಕ್ಷೇತ್ರಕ್ಕೆ ಒಳ್ಳೆಯ ಕೆಲಸವನ್ನು
ಮಾಡಿದ್ದೀರಿ. ಹೀಗೆಯೇ ನಿಮ್ಮ ಉತ್ಸಾಹ
ಮುಂದು ವರಿಯಲಿ. ನಾಡಿನ ಸಾಹಿತ್ಯಕ್ಕೆ
ಪತ್ರಿಕೆಯ ಪಾಲು ತಲುಪಲಿ.

## ❊ ಪತ್ರಿಕೆಗೆ ಶುಭವನ್ನು ಕೋರುವ ❊

| | |
|---|---|
| ಶ್ರೀ ಚಂದ್ರಶೇಖರ ಆರಬೋಳ | ಪುರಸಭಾಧ್ಯಕ್ಷರು ಶಹಾಪುರ |
| ಶ್ರೀ ಅಬ್ದುಲಖದೀರ ಸಂಗ್ರಾಮ | ಉಪಾಧ್ಯಕ್ಷರು ಪುರಸಭೆ ಶಹಾಪುರ |
| ಶ್ರೀ ವೆಂಕನಗೌಡ ಹಾಲಭಾವಿ ವಕೀಲರು | ಸಂಚಾಲಕರು ಶಹಾಪುರ ಜಿಲ್ಲಾ ಹೋರಾಟ ಸಮಿತಿ |
| ಶ್ರೀ ಭೀಮಯ್ಯಗೌಡ | ಪುರಸಭಾ ಸದಸ್ಯರು ಶಹಾಪುರ |
| ಶ್ರೀ ಸುರೇಂದ್ರ ಪಾಟೀಲ ಮುಡ್ಬಾಳ | ಪುರಸಭಾ ಸದಸ್ಯರು ಶಹಾಪುರ |
| ಶ್ರೀ ಗುರುನಾಥರಡ್ಡಿ ವಕೀಲರು | ಶಹಾಪುರ |
| ಡಾ॥ ಧರ್ಮರಡ್ಡಿ ಬಿ. ಪಾಟೀಲ | ಅಧ್ಯಕ್ಷರು ತಾಲೂಕಾ ಖಾಸಗಿ ವೈದ್ಯರ ಸಂಘ ಶಹಾಪುರ |

---

[illegible]

# ಈ ಸಂಚಿಕೆಯ ಲೇಖಕರ ವಿಳಾಸಗಳು

| | | |
|---|---|---|
| ೧ | ಆನಂದ ವಿ. ಪಾಟೀಲ – | ಪ್ರಭಾಕರ ಆಲಗುಡಕರ್ ಕಂಪೌಂಡ ವಿಠ್ಠಲ ನಗರ ಗುಲಬರ್ಗಾ |
| ೨ | ಬಾಪುಗೌಡ ಶಾಡಲಗೇರಿ – | ಬಸವೇಶ್ವರ ಕಾಲೊನಿ ಗುಲಬರ್ಗಾ |
| ೩ | ಸಿದ್ಧರಾಮ ಹೊನ್ಕಲ್ – | ದಿಗ್ಗಿ ಬಿಲ್ಡಿಂಗ್ ಶಹಾಪುರ-೫೮೫೨೨೩ ಜಿ. ಗುಲಬರ್ಗಾ |
| ೪ | ಬಸವರಾಜ ರೂಮಾಲ – | ರಂಗಂಪೇಟೆ ಅಂಚೆ. ಜಿ. ಗುಲಬರ್ಗಾ |
| ೫ | ಮೋಹನಚಂದ ಕಿರಣಗಿ – | ಅಂಚೆ ಇಂಡಿ ಜಿಲ್ಲೆ ಬಿಜಾಪುರ |
| ೬ | ಸಿದ್ಧರಾಮ ಉಪ್ಪಿನ – | ಅಂಚೆ ಆಲಮೇಲ ಜಿ. ಬಿಜಾಪುರ |
| ೭ | ಮಹಾಂತಪ್ಪ ಜಾಗಟೆ – | ಅಂಚೆ ದೋರನಹಳ್ಳಿ ಜಿ. ಗುಲ್ಬರ್ಗಾ |
| ೮ | ವೀರೇಶ ಸಿರಸಗಿ – | ಅಂಚೆ ಶಹಾಪುರ ಜಿ. ಗುಲಬರ್ಗಾ |
| ೯ | ಮಹಿಪಾಲರಡ್ಡಿ - | ಅಂಚೆ ಸೇಡಂ. |
| | ಎಸ್, ಮುನ್ನೂರ - | ಜಿ. ಗುಲಬರ್ಗಾ |
| ೧೦ | ಕೆ. ಮರಿಸ್ವಾಮಿ – | ಅಂಚೆ ಕೊಪ್ಪಳ ಜಿ. ರಾಯಚೂರ |
| ೧೧ | ಜಯಶ್ರೀ ಕುಲಕರ್ಣಿ – | ಅಂಚೆ ಚಿಂಚೋಳಿ ಜಿ. ಗುಲಬರ್ಗಾ |
| ೧೨ | ಶುಭಶ್ರೀ ದೀಕ್ಷಿತ - | ಎಸ್.ಬಿ.ಎಚ್, ಜೂನಲ್ ಆಫೀಸ್ ಗುಲಬರ್ಗಾ |
| ೧೩ | ಗೌತಮ್ ತಿಮ್ಮಾಪುರಿ – | ಅಂಚೆ ತಿಮ್ಮಾಪುರ ತಾ. ಸುರಪುರ |
| ೧೪ | ಎಸ್. ಜಿ. ಸ್ವಾಮಿ – | ಗಾಜಗರಪೇಟೆ ರಾಯಚೂರು |
| ೧೫ | ಪ್ರೊ. ಸೂಗಯ್ಯ ಹಿರೇಮಠ – | ಅಂಚೆ ಶಹಾಪುರ ಜಿ. ಗುಲಬರ್ಗಾ |
| ೧೬ | ಅ. ವಿ. ಮೂರ್ತಿಗೌಡ – | ಅಂಚೆ ಹಲಗೇರಿ, ಕೊಪ್ಪಳ ರಾಯಚೂರು ಜಿಲ್ಲೆ |
| ೧೭ | ಪ್ರಭು ಖಾನಾಪುರೆ – | ಬಡೇಪುರ ಕಾಲೊನಿ ವಿ.ವಿ. ಮಾರ್ಗ ಗುಲಬರ್ಗಾ |
| ೧೮ | ಪ್ರೊ. ವಾಸುದೇವ ಸೇಡಂ – | ಅರ್ಥ ಶಾಸ್ತ್ರ ವಿಭಾಗ ಗುಲಬರ್ಗಾ– ವಿಶ್ವವಿದ್ಯಾನಿಲಯ ಗುಲಬರ್ಗಾ |
| ೧೯ | ಡಿ. ಜಿ. ಬಳೂರಗಿ – | ಸ.ಪ. ಪೂರ್ವ ಕಾಲೇಜು ಭೀ.ಗುಡಿ, ಗುಲಬರ್ಗಾ |
| ೨೦ | ಡಿ.ಎಂ. ನದಾಫ – | ಅಂಚೆ ಅಫಜಲ್‌ಪುರ ಜಿ. ಗುಲಬರ್ಗಾ |
| ೨೧ | ಪ್ರೊ. ರವೀಂದ್ರ ಕರ್ಜಗಿ – | ಎನ್.ವ್ಹಿ. ಡಿಗ್ರಿಕಾಲೇಜ ಗುಲಬರ್ಗಾ |
| ೨೨ | ಕಿರಮಗಿ ಸುರೇಂದ್ರಕುಮಾರ – | ಅಂಚೆ ಕಮಲಾಪುರ ಜಿ. ಗುಲಬರ್ಗಾ |



## ಹೊಸದಿಕ್ಕು ಪತ್ರಿಕೆಗೆ
## ಹಾರ್ದಿಕ ಶುಭಾಶಯಗಳು
## ಮಂಡಲ ಪಂಚಾಯತ ಕಾರ್ಯಾಲಯ, ಚಾಮನಾಳ

---

ನೆಲದ ಮರೆಯ ನಿಧಾನದಂತೆ
ಮೊದಲ ಸಂಚಿಕೆ ಮೇಲೆದ್ದು ಬಂದಿದೆ
ಪತ್ರಿಕೆ ತನ್ನ ಪಥದಲ್ಲಿ ಯಶಸ್ಸನ್ನು ಕಾಣಲಿ
ಈ ಭಾಗದ ಸಾಹಿತ್ಯಕ್ಕೆ ಸೋಪಾನವಾಗಲಿ
ಎಂದು ಹಾರೈಸುವ

ತಮ್ಮ

ಶ್ರೀ ಲಕ್ಷ್ಮೀಕಾಂತ ಕುಲಕರ್ಣಿ
ಕಾರ್ಯದರ್ಶಿ ಮಂ. ಪಂ. ಚಾಮನಾಳ

ಶ್ರೀ ಶಿವಮಹಾಂತಪ್ಪ ಸಾಹು ಚಂದಾಪುರ
ಮಂಡಲ ಪ್ರಧಾನರು ಚಾಮನಾಳ



PRINTED MATTER
**Book-Post**

ಗೆ,

ಶ್ರೀಮತಿ/ಶ್ರೀ [illegible]
[illegible]
x ಧಾರವಾಡ - 580004 x [illegible]



ಸಂಪಾದಕರು, ಪ್ರಕಾಶಕರು : ತಿಮ್ಮಯ್ಯ ಪುರ್ಲೆ, ಶಹಾಪುರ (ಕಲಬುರ್ಗಿ)
ಮುದ್ರಕರು : ಗ್ರಿನೋಬಲ್ಸ ಪ್ರಾ. ಲಿ., ಸುಪರ ಮಾರ್ಕೆಟ್, ಗುಲಬರ್ಗಾ-೧